CPMG / KA / BG-GPO/13/2003-2005

ವಿಶ್ವಮಾನವ ವರ್ಷ



# ಕರ್ನಾಟಕ ರಾಜ್ಯಪತ್ರ

ಅಧಿಕೃತವಾಗಿ ಪ್ರಕಟಿಸಲಾದುದು

| ಸಂಪುಟ ೧೩೯ | ಬೆಂಗಳೂರು, ಗುರುವಾರ, ಆಗಸ್ಟ್ ೫, ೨೦೦೪ (ಶ್ರಾವಣ ೧೪, ಶಕ ವರ್ಷ ೧೯೨೬) | ಸಂಚಿಕೆ ೩೨ |
|---|---|---|

## ಭಾಗ - ೫

## ಸರ್ಕಾರದ ಮತ್ತು ಖಾಸಗಿ ಜಾಹೀರಾತುಗಳು, ಲೋಕಸೇವಾ ಆಯೋಗದ ಜಾಹೀರಾತುಗಳು, ನೇಮಕಾತಿ ಸಮಿತಿಗಳ ಜಾಹೀರಾತುಗಳು.

**ತೋಟಗಾರಿಕೆ ಇಲಾಖೆ**

**ಹಿರಿಯ ಸಹಾಯಕ ತೋಟಗಾರಿಕೆ ನಿರ್ದೇಶಕರ ಕಛೇರಿ, (ರಾಜ್ಯ ವಲಯ) ಕೋಲಾರ-563 101**

**ಸೀಬೆ ಫಸಲಿನ ವಿಲೇವಾರಿಗೆ ಟೆಂಡರ್-ಕಂ-ಬಹಿರಂಗ ಹರಾಜು ಪ್ರಕಟಣೆ**

**ಸಂಖ್ಯೆ: ತೋಇ:ಹಿಸತೋನಿ:ರಾವ:ಕೋನಿ:ಸತೋಅ-1:29:2004-05, ದಿನಾಂಕ: 19ನೇ ಜುಲೈ 2004**

ಈ ಮೂಲಕ ಸಾರ್ವಜನಿಕರಿಗೆ ಹಾಗೂ ಆಸಕ್ತ ಹಣ್ಣು ವ್ಯಾಪಾರಸ್ಥರಿಗೆ ತಿಳಿಯಪಡಿಸುವುದೇನೆಂದರೆ ಈ ಕಛೇರಿ ವ್ಯಾಪ್ತಿಯಲ್ಲಿ ಬರುವ ಈ ಕೆಳಕಂಡ ತೋಟಗಾರಿಕೆ ಕ್ಷೇತ್ರ ಮತ್ತು ನರ್ಸರಿಗಳ ದಿನಾಂಕ: 1.7.2004 ರಿಂದ 31.12.2004 ರ ಅವಧಿಯ ಸೀಬೆ ಫಸಲಿನ ವಿಲೇವಾರಿಯನ್ನು ಪರಿಷ್ಕೃತ ನಿಯಮಾವಳಿಗಳ ರೀತ್ಯಾ ಟೆಂಡರ್-ಕಂ-ಬಹಿರಂಗ ಹರಾಜಿನ ಮೂಲಕ ಆಯಾ ಕ್ಷೇತ್ರಗಳಲ್ಲೇ ವಿಲೇವಾರಿ ಮಾಡಲಾಗುವುದು. ಟೆಂಡರ್-ಕಂ-ಬಹಿರಂಗ ಹರಾಜನ್ನು ನಡೆಸುವ ದಿನಾಂಕ ಮತ್ತು ವೇಳೆಯನ್ನು ಈ ಕೆಳಕಂಡಂತೆ ನಿಗದಿಪಡಿಸಿದೆ.

| ಕ್ರ.ಸಂ. | ಕ್ಷೇತ್ರದ ಹೆಸರು | ಫಸಲಿನ ಹೆಸರು | ಮುಂಗಡ ಠೇವಣಿ ಮೊತ್ತ (ರೂ.ಗಳಲ್ಲಿ) | ಟೆಂಡರ್-ಕಂ-ಬಹಿರಂಗ ಹರಾಜು ನಡೆಸುವ ದಿನಾಂಕ ಮತ್ತು ವೇಳೆ |
|---|---|---|---|---|
| 1 | 2 | 3 | 4 | 5 |
| 1 | ಪಿಆರ್‌ಎಸ್ ತೋಟಗಾರಿಕೆ ಕ್ಷೇತ್ರ, ಚಿಕ್ಕಬಳ್ಳಾಪುರ ತಾಲ್ಲೂಕು | ಸೀಬೆ | 1000.00 | ದಿನಾಂಕ: 19.8.2004 ಮಧ್ಯಾಹ್ನ 12.30 ಗಂಟೆ |
| 2 | ಜೋಡಿವಮ್ಮ ಸಂದ್ರ ತೋಟಗಾರಿಕೆ ಕ್ಷೇತ್ರ ಮುಳಬಾಗಿಲು ತಾಲ್ಲೂಕು | ಸೀಬೆ | 1000.00 | ದಿನಾಂಕ: 23.8.2004 ಮಧ್ಯಾಹ್ನ 1.00 ಗಂಟೆ |

ಈ ಮೇಲ್ಕಂಡ ಫಸಲುಗಳ ಬಗ್ಗೆ ಟೆಂಡರ್ ಸಲ್ಲಿಸಲು ಇಚ್ಚಿಸುವವರು, ಟೆಂಡರ್ ಫಾರಂನ್ನು ರೂ. 25.00 (ಇಪ್ಪತ್ತೈದು ರೂ.ಗಳು ಮಾತ್ರ) ಗಳನ್ನು ಪಾವತಿಸಿ, ಈ ಕೆಳ ಸಹಿದಾರರ ಕಛೇರಿಯಲ್ಲಿ, ಕಛೇರಿ ವೇಳೆಯಲ್ಲಿ ಪಡೆಯಬಹುದಾಗಿರುತ್ತದೆ (ರಜಾದಿನಗಳನ್ನು ಹೊರತುಪಡಿಸಿ) ಟೆಂಡರ್ ಫಾರಂ ಸಲ್ಲಿಸುವವರು ಠೇವಣಿ ಮೊತ್ತ ಮತ್ತು ಫಸಲಿಗೆ ತಾವು ನಮೂದಿಸಿದ ಮೊತ್ತದ ಶೇಕಡ 50ರ ಭಾಗದ ಮೊತ್ತವನ್ನು ಅಡ್ಡಗೆರೆ ಎಳೆದ ಡಿಡಿ ರೂಪದಲ್ಲಿ ಕ್ರಮ ಸಂಖ್ಯೆ (1) ಪಿಆರ್‌ಎಸ್ ತೋಟಗಾರಿಕೆ ಕ್ಷೇತ್ರ, ಚಿಕ್ಕಬಳ್ಳಾಪುರ ತಾಲ್ಲೂಕು ಕ್ಷೇತ್ರದ ಫಸಲಿಗೆ ಸಹಾಯಕ ತೋಟಗಾರಿಕೆ ನಿರ್ದೇಶಕರು ಪಿಆರ್‌ಎಸ್ ತೋಟಗಾರಿಕೆ ಕ್ಷೇತ್ರ, ಚಿಕ್ಕಬಳ್ಳಾಪುರ ತಾಲ್ಲೂಕು ರವರ ಹೆಸರಿಗೆ ಹಾಗೂ ಕ್ರಮಸಂಖ್ಯೆ (2)ರ ಕ್ಷೇತ್ರದ ಫಸಲಿಗೆ ಹಿರಿಯ ಸಹಾಯಕ ತೋಟಗಾರಿಕೆ ನಿರ್ದೇಶಕರು (ರಾಜ್ಯವಲಯ) ಕೋಲಾರ ರವರ ಹೆಸರಿಗೆ ಪಡೆದು ಮೊಹರಾದ ಟೆಂಡರ್ ಜೊತೆಯಲ್ಲಿ ಕಡ್ಡಾಯವಾಗಿ ಲಗತ್ತಿಸಬೇಕು. ಬಹಿರಂಗ ಹರಾಜಿನಲ್ಲಿ ಭಾಗವಹಿಸುವವರು ಮೇಲಿನ ಅಂಕಣ 4 ರಲ್ಲಿ ಸೂಚಿಸಿರುವ ಮೊತ್ತವನ್ನು ಠೇವಣಿ ಮಾಡಿ ಹರಾಜಿನಲ್ಲಿ ಭಾಗವಹಿಸುವ ಹಕ್ಕನ್ನು ಪಡೆಯಬಹುದು.

ಟೆಂಡರ್ ಸಲ್ಲಿಸುವವರು ಭರ್ತಿ ಮಾಡಿದ ಮೊಹರಾದ ಟೆಂಡರ್ ಫಾರಂಗಳನ್ನು ಹರಾಜು ನಡೆಯುವ ದಿನಾಂಕದಂದು ಬೆಳಿಗ್ಗೆ 11.00 ಗಂಟೆಯೊಳಗಾಗಿ ಆಯಾ-ಕ್ಷೇತ್ರಗಳಲ್ಲಿ ಸಲ್ಲಿಸಬೇಕು.

ಬಹಿರಂಗ ಹರಾಜಿನಲ್ಲಿ ಬಿಡ್ ಮಾಡಿದ ಯಶಸ್ವಿ ಬಿಡ್ಡುದಾರರು ಹರಾಜಿನ ಮೊತ್ತದ ಶೇಕಡ 50ರ ಭಾಗದ ಮೊತ್ತವನ್ನು ಸ್ಥಳದಲ್ಲಿಯೇ ಪಾವತಿಸುವುದು. ಫಸಲಿನ ಟೆಂಡರ್-ಯಾ-ಬಹಿರಂಗ ಹರಾಜಿನಲ್ಲಿ ಬಂದ ಅತಿ ಹೆಚ್ಚು ಬಿಡ್ ಮೊತ್ತವನ್ನು ಅಂತಿಮ ಬಿಡ್ ಮೊತ್ತವೆಂದು ಪರಿಗಣಿಸಲಾಗುವುದು.

ಮೇಲಿನ ಕ್ಷೇತ್ರಗಳ ಫಸಲುಗಳ ಟೆಂಡರ್-ಯಾ-ಬಹಿರಂಗ ಹರಾಜು ಅನುಮೋದನೆಯಾದ ದಿನಾಂಕದಿಂದ 10 ದಿನಗಳೊಳಗಾಗಿ ಪೂರ್ಣ ಮೊತ್ತವನ್ನು ಪಾವತಿಸಿ, ಫಸಲನ್ನು ರೂಢಿಸಿಕೊಳ್ಳಬಹುದಾಗಿರುತ್ತದೆ. ಸದರಿ ಟೆಂಡರ್-ಯಾ-ಬಹಿರಂಗ ಹರಾಜು ಪ್ರಕ್ರಿಯೆಯನ್ನು ಅಂಗೀಕರಿಸುವ ಅಥವಾ ತಿರಸ್ಕರಿಸುವ ಹಕ್ಕನ್ನು ತೋಟಗಾರಿಕೆ ನಿರ್ದೇಶಕರು ಪಡೆದಿರುತ್ತಾರೆ. ಇಲಾಖೆಯ ಅಧಿಕಾರಿಗಳ ತೀರ್ಮಾನವೇ ಅಂತಿಮವಾಗಿರುತ್ತದೆ. ಹೆಚ್ಚಿನ ಪರಿಷ್ಕೃತ ನಿಯಮಾವಳಿಗಳ ವಿವರ, ನಿಬಂಧನೆ ಷರತ್ತುಗಳನ್ನು ಈ ಕೆಳಸಹಿದಾರರ ಕಛೇರಿಯಲ್ಲಿ ಅಥವಾ ಸಂಬಂಧಪಟ್ಟ ಕ್ಷೇತ್ರಗಳ ಅಧಿಕಾರಿಗಳಲ್ಲಿ ಕಛೇರಿ ವೇಳೆಯಲ್ಲಿ ಪಡೆಯಬಹುದು. ಯಶಸ್ವಿ ಬಿಡ್‌ದಾರರು ಒಟ್ಟು ಫಸಲಿನ ಶೇಕಡ 5 ರಷ್ಟು ಭಾಗವನ್ನು ಇಲಾಖೆಯು ನಿಗದಿಪಡಿಸಿದ ದರದಲ್ಲಿ ಸ್ಥಳೀಯವಾಗಿ ಮಾರಾಟ ಮಾಡಲು ಸಿದ್ಧರಿರಬೇಕು.

ಹಿರಿಯ ಸಹಾಯಕ ತೋಟಗಾರಿಕೆ ನಿರ್ದೇಶಕರು,
(ರಾಜ್ಯವಲಯ) ಕೋಲಾರ.

ಪಿ.ಆರ್. 349

## ಪ್ರಾಚ್ಯವಸ್ತು ಮತ್ತು ಸಂಗ್ರಹಾಲಯಗಳ ನಿರ್ದೇಶನಾಲಯ, ಹೊಸಪೇಟೆ, ಬಳ್ಳಾರಿ ಜಿಲ್ಲೆ

## ಅಲ್ಪಾವಧಿ ಟೆಂಡರ್ ಪ್ರಕಟಣೆ

**ನಂ. ಡಿಎಎಂ:ಸಂ.ವಿ.:ಹೊಸಪೇಟೆ:ಟೆಂಡರ್.3:2004-05, ದಿನಾಂಕ: 14ನೇ ಜುಲೈ 2004**

ಕರ್ನಾಟಕ ರಾಜ್ಯಪಾಲರ ಪರವಾಗಿ ಪ್ರಾಚ್ಯವಸ್ತು ಮತ್ತು ಸಂಗ್ರಹಾಲಯಗಳ ನಿರ್ದೇಶನಾಲಯ ಹೊಸಪೇಟೆ, ಬಳ್ಳಾರಿ ಜಿಲ್ಲೆ ಇವರಿಂದ ಈ ಕೆಳಕಂಡ ಕಾಮಗಾರಿ ಕೆಲಸಗಳಿಗೆ ಪ್ರಖ್ಯಾತ, ನುರಿತ ಹಾಗೂ ಇಲಾಖೆಯಲ್ಲಿ ಈ ರೀತಿ ಕೆಲಸ ಮಾಡಿರುವ ಗುತ್ತಿಗೆದಾರರಿಂದ ಐಟಂವಾರು ದರಗಳನ್ನು ನಮೂದಿಸಿದ ಟೆಂಡರ್‌ಗಳನ್ನು ದ್ವಿಪ್ರತಿಯಲ್ಲಿ ನಿಗದಿತ ಇ.ಎಂ.ಡಿ. ಹಣದೊಂದಿಗೆ ಮೊಹರಾದ ಲಕೋಟೆಯ ಮೇಲೆ ಕೆಲಸದ ಹೆಸರನ್ನು ನಮೂದಿಸಿದ ಟೆಂಡರ್‌ಗಳನ್ನು ಆಹ್ವಾನಿಸಲಾಗಿದೆ. ಟೆಂಡರ್‌ಗಳನ್ನು ದಿನಾಂಕ: 10.8.2004 ರಂದು ಭಾರತೀಯ ಕಾಲಮಾನ ಮಧ್ಯಾಹ್ನ 4.00 ಘಂಟೆಯವರೆಗೆ ಸ್ವೀಕರಿಸಲಾಗುವುದು. ಸಾಧ್ಯವಾದಲ್ಲಿ ಅದೇ ದಿವಸ ಟೆಂಡರ್‌ಗಳನ್ನು ಅಪರಾಹ್ನ 4.30 ಘಂಟೆಯ ನಂತರ ಗುತ್ತಿಗೆದಾರರ ಸಮ್ಮುಖದಲ್ಲಿ ತೆರೆಯಲಾಗುವುದು. ಈ ಕೆಳಕಂಡ ಕೆಲಸಗಳಿಗೆ ಟೆಂಡರ್ ಫಾರಂಗಳಿಗಾಗಿ ನಿಗದಿತ ಟೆಂಡರ್ ಫಾರಂ ಶುಲ್ಕದೊಂದಿಗೆ ಅರ್ಜಿ ಸಲ್ಲಿಸಲು ಕೊನೆಯ ದಿನಾಂಕ: 31.7.2004 ಸಾಯಂಕಾಲ 5.30 ರವರೆಗೆ. ಟೆಂಡರ್ ಫಾರಂ ಶುಲ್ಕವನ್ನು ಯಾವುದೇ ಕಾರಣಕ್ಕೂ ಹಿಂದುರುಗಿಸಲಾಗುವುದಿಲ್ಲ. ಖಾಲಿ ಟೆಂಡರ್ ಫಾರಂಗಳನ್ನು ದಿನಾಂಕ: 4.8.2004 ರಿಂದ 6.8.2004 ರವರೆಗೆ ವಿತರಿಸಲಾಗುವುದು.

| ಕ್ರಮ ಸಂಖ್ಯೆ | ಕಾಮಗಾರಿಯ ವಿವರ |
|---|---|
| **1.** | **ಸ್ಮಾರಕ ಹಾಗೂ ವಸ್ತು ಸಂಗ್ರಹಾಲಯದ ಪರಿಚಯಫಲಕಗಳು ಹಾಗೂ ಮಾರ್ಗ ನಿರ್ದೇಶನ ಫಲಕಗಳು** |
| 1 | ಉತ್ತಮ ದರ್ಜೆಯ 12 ಗೇಜ್ ಮೈಲ್ಡ್ ಸ್ಟೀಲ್ ಶೀಟನ್ನು 2 ಅಡಿ ಅಗಲ ಹಾಗೂ 3 ಅಡಿ ಎತ್ತರವಿರುವಂತೆ ಕತ್ತರಿಸುವುದು. ಶೀಟನ್ನು ಅಳವಡಿಸಲು ಸೂಕ್ತ ಸ್ಥಳಗಳಲ್ಲಿ ರಂಧ್ರವನ್ನು ಕೊರೆದು ನಯಗೊಳಿಸುವುದು.<br>ಅ) ಮಾರ್ಗ ನಿರ್ದೇಶನ ಫಲಕಕ್ಕಾಗಿ 1 ಅಡಿ ಎತ್ತರ 4 ಅಡಿ ಉದ್ದದ ಫಲಕಗಳು. |
| 2 | ಶೀಟ್ ಮೇಲಿನ ಧೂಳು ಹಾಗೂ ತುಕ್ಕನ್ನು ಎಲೆಕ್ಟ್ರಿಕ್ ಒಲೆಯಲ್ಲಿ ನಿಗದಿತ ತಾಪಮಾನದಲ್ಲಿ ಬಿಸಿ ಮಾಡಿ ತೆಗೆಯುವುದು. |
| 3 | ಶೀಟನ್ನು ಗಂಧಕಾಮ್ಲ ಹಾಗೂ ಸೋಡ ನೀರಿನಿಂದ ತೊಳೆಯುವುದು ಮತ್ತು ಶುಭ್ರ ನೀರಿನಲ್ಲಿ ತೊಳೆದು ಸ್ವಚ್ಛಪಡಿಸುವುದು. |
| 4 | ಸಿದ್ಧಪಡಿಸಿದ ಫಲಕಕ್ಕೆ ಮೂಲ ಹೊದಿಕೆಯಾಗಿ ಕಪ್ಪು ಎನಾಮಲ್ ಬಣ್ಣವನ್ನು ಏರ್ ಕಂಪ್ರೆಸರ್ ಮೂಲಕ ಎರಡು ಕಡೆಗಳಿಗೂ ಲೇಪಿಸುವುದು ಹಾಗೂ ಒಣಗಿಸುವುದು. ನಂತರ ಶೀಟನ್ನು ವಿದ್ಯುತ್ ಒಲೆಯಲ್ಲಿ @870-880 ಸೆಂಟಿಗ್ರೇಡ್ ತಾಪಮಾನದಲ್ಲಿ ಬಿಸಿ ಮಾಡುವುದು. |
| 5 | ಫಲಕದ ಒಂದು ಮಗ್ಗುಲಿಗೆ ಬಿಳಿಯ ಎನಾಮಲ್ ಬಣ್ಣದ ಲೇಪನ ಮಾಡುವುದು. ಒಣಗಿದ ನಂತರ @830-840 ಸೆಂಟಿಗ್ರೇಡ್ ತಾಪಮಾನದಲ್ಲಿ ಬಿಸಿ ಮಾಡುವುದು. |
| 6 | ಬಿಳಿ ಬಣ್ಣದ ಫಲಕದ ಮೇಲೆ ನಿರ್ದೇಶನ ನೀಡಿದ ಬಣ್ಣದ ಲೇಪನ ಮಾಡುವುದು ಹಾಗೂ ಇದರ ಮೇಲೆ ನೀಡಲಾದ ಲೇಖನವನ್ನು ಸೂಕ್ತ ಎತ್ತರ ಹಾಗೂ ಅಕ್ಷರಗಳಲ್ಲಿ ಮೊದಲೇ ಮುದ್ರಿಸಿಕೊಂಡು ಸ್ಟೆನ್ಸಿಲ್ (stencil) ನಿಂದ ಅಕ್ಷರಗಳನ್ನು ಮುದ್ರಿಸುವುದು ಹಾಗೂ ನಿರ್ದೇಶಿಸಿದ ಬಣ್ಣದಲ್ಲಿ ಅಕ್ಷರಗಳನ್ನು ಮೂಡಿಸುವುದು. |
| 7 | ನಂತರ ಫಲಕವನ್ನು ವಿದ್ಯುತ್ ಒಲೆಯಲ್ಲಿ @790-800 ಡಿಗ್ರಿ ಸೆಂಟಿಗ್ರೇಡ್ ತಾಪಮಾನದಲ್ಲಿ ಬಿಸಿ ಮಾಡುವುದು. ವಿವಿಧ ಬಣ್ಣಗಳ ಅಕ್ಷರ ಹಾಗೂ ಇತರೆ ಗುರುತುಗಳಿಗಾಗಿ ಐಟಂ ನಂ. 6ರ ವಿಧಾನವನ್ನು ಮಾಡುವುದು. |
| 8 | ಫಲಕವು ನಿರ್ದೇಶನದಂತೆ ಸಿದ್ಧಗೊಂಡ ನಂತರ ವ್ಯವಸ್ಥಿತ ಹೊದಿಕೆಯೊಂದಿಗೆ ಪ್ಯಾಕ್ ಮಾಡಿ ಉಪ ನಿರ್ದೇಶಕರು, ಮೈಸೂರು, ಬೆಂಗಳೂರು, ಹುಬ್ಬಳ್ಳಿ, ಕಮಲಾಪುರ ಈ ಸ್ಥಳಗಳಿಗೆ ಸರಬರಾಜು ಮಾಡುವುದು. |

ವಿಟ್ರಿಯಸ್ ಎನಾಮಲ್ ರೀತಿಯ ಸಿರಾಮಿಕ್ ವಿಧಾನದಲ್ಲಿ ಮೆದು ಕಬ್ಬಿಣದ ಶೀಟ್ ಮೇಲೆ ನಿರ್ಮಿತಗೊಂಡ ಫಲಕವು ಉತ್ತಮ ದರ್ಜೆಯ ಬಣ್ಣವನ್ನು ವಿವಿಧ ಬಣ್ಣಗಳಲ್ಲಿ ಸುಮಾರು @800-900 ಡಿಗ್ರಿ ಸೆಂಟಿಗ್ರೇಡ್ ತಾಪಮಾನದಲ್ಲಿ ಮೇಲಿನ ವಿಧಾನದಲ್ಲಿ ನಿರ್ಮಿಸಿದಲ್ಲಿ

ಹವಾಮಾನದ ವೈಪರೀತ್ಯ, ಮಳೆ, ಬಿಸಿಲು ಫಲಕದ ಮೇಲೆ ಮರು ಬರೆಯುವುದರಿಂದ ಮುಕ್ತವಾಗಿ ಹಲವಾರು ವರ್ಷ ಬಳಕೆ ಬರುವಂತಿರಬೇಕು.

ಫಲಕಗಳಿಗೆ ಬೇಕಾದ ಲೇಖನವನ್ನು ಕನ್ನಡ ಮತ್ತು ಆಂಗ್ಲ ಭಾಷೆಯಲ್ಲಿ ನೀಡಲಾಗುವುದು. ಫಲಕದ ಕೆಳಭಾಗದ ಎಡ ಭಾಗದಲ್ಲಿ ಕೆಲವು ನಿಷೇಧಿತ ಚಿತ್ರವಿರುವ ಚಿಹ್ನೆಗಳನ್ನು ಅಳವಡಿಸಬೇಕು. ಮೇಲ್ಭಾಗದಲ್ಲಿ ಸ್ಮಾರಕಕ್ಕೆ ಹೊಂದುವ ಹಾಗೆ ಚಿಹ್ನೆಗಳನ್ನು ನೀಡಲಾಗುವುದು. ಇವುಗಳನ್ನು ಅಳವಡಿಸಬೇಕು.

ಮಾರ್ಗಸೂಚಿ ಫಲಕಗಳಿಗೆ ಒಂದು ಭಾಗದಲ್ಲಿ ಸ್ಮಾರಕದ ಚಿಹ್ನೆ ಹಾಗೂ ಇನ್ನೊಂದು ಭಾಗದಲ್ಲಿ ಬಾಣದ ಗುರುತನ್ನು ಸ್ಮಾರಕ ಅಥವಾ ವಸ್ತು ಸಂಗ್ರಹಾಲಯದ ಹೆಸರಿನೊಂದಿಗೆ ಮುದ್ರಿಸಬೇಕು. ನಿರ್ದೇಶಕರು ನೀಡುವ ಲೇಖನದಲ್ಲಿರುವ ಅಕ್ಷರ ವಿನ್ಯಾಸ ಹಾಗೂ ಅದೇ ಅಳತೆಯಿಂದ ಕೂಡಿರಬೇಕು.

| | |
|---|---|
| ಸ್ಮಾರಕ ಹಾಗೂ ವಸ್ತು ಸಂಗ್ರಹಾಲಯದ ಪರಿಚಯ ಫಲಕಗಳು | 150 ಸಂಖ್ಯೆ |
| ಮಾರ್ಗ ನಿರ್ದೇಶನ ಫಲಕಗಳು | 300 ಸಂಖ್ಯೆ |
| ಖಾಲಿ ಟೆಂಡರ್ ಫಾರಂ ದರ (ಕೆ.ಎಸ್.ಟಿ ಮತ್ತು ಎಸ್.ಸಿ. ಆನ್ ಕೆ.ಎಸ್.ಟಿ. ಸೇರಿದಂತೆ) | ರೂ. 1000-00 (ಹಿಂತಿರುಗಿಸಲಾಗುವುದಿಲ್ಲ) |
| ಇ.ಎಮ್.ಡಿ. | ರೂ. 10,000-00 |
| ಗುತ್ತಿಗೆಯ ಕಾಲಾವಧಿ | 2004 ಡಿಸೆಂಬರ್ ಅಂತ್ಯದೊಳಗೆ |

**ನಿಯಮಗಳು ಮತ್ತು ಸೂಚನೆಗಳು:**

1. ಟೆಂಡರ್ ಹಾಕಲು ಇಚ್ಛಿಸುವ ಗುತ್ತಿಗೆದಾರರು ಈ ರೀತಿಯ ಕಾಮಗಾರಿಗಳನ್ನು ಸಮರ್ಪಕವಾಗಿ ನಿರ್ವಹಿಸಿದವರಾಗಿರಬೇಕು ಹಾಗೂ ಯಶಸ್ವಿಯಾಗಿ ಮುಗಿಸಿದವರಾಗಿರಬೇಕು.
2. ಮೇಲಿನ ಕಾಮಗಾರಿಗಳಿಗೆ ಅಗತ್ಯವಾದ ಎಲ್ಲಾ ಉಪಕರಣಗಳನ್ನು ಹೊಂದಿರಬೇಕು ಹಾಗೂ ನುರಿತ ಕೆಲಸದವರನ್ನು ಹೊಂದಿರಬೇಕು.
3. ಟೆಂಡರ್‌ನಲ್ಲಿ ನಮೂದಿಸಿದ ದರಗಳು 1 ವರ್ಷದವರೆಗೆ ಮೌಲ್ಯ ಹೊಂದಿರಬೇಕು, ನಿಬಂಧನೆಯುಕ್ತ ಟೆಂಡರ್‌ಗಳನ್ನು ತಿರಸ್ಕರಿಸಲಾಗುವುದು.
4. ಯಾವುದೇ ಕಾರಣ ನೀಡದೆ ಯಾವುದೇ ಟೆಂಡರ್‌ಗಳನ್ನು ಅಂಗೀಕರಿಸುವ ಅಥವಾ ತಿರಸ್ಕರಿಸುವ ಹಕ್ಕನ್ನು ನಿರ್ದೇಶಕರು, ಪ್ರಾಚ್ಯವಸ್ತು ಮತ್ತು ಸಂಗ್ರಹಾಲಯ ನಿರ್ದೇಶನಾಲಯ, ಹೊಸಪೇಟೆ ಇವರು ಕಾದಿರಿಸಿರುತ್ತಾರೆ.
5. ಮೇಲಿನ ಕಾಮಗಾರಿಗಳಲ್ಲಿ ಏನಾದರೂ ಸೇರ್ಪಡೆ ಅಥವಾ ಮಾರ್ಪಡಿಸುವ ಬಗೆಗೆ ಹಕ್ಕನ್ನು ಕಾಯ್ದಿರಿಸಲಾಗಿದೆ.
6. ಖಾಲಿ ಟೆಂಡರ್ ಫಾರಂ ಹಣ ಹಾಗೂ ಇ.ಎಂ.ಡಿ. ಹಣವನ್ನು ರಾಷ್ಟ್ರೀಕೃತ ಬ್ಯಾಂಕ್‌ನಿಂದ ಪಡೆದ ಡಿ.ಡಿ. ಅಥವಾ ಬ್ಯಾಂಕ್ ಗ್ಯಾರಂಟಿ ರೂಪದಲ್ಲಿ ನಿರ್ದೇಶಕರು, ಪ್ರಾಚ್ಯವಸ್ತು ಮತ್ತು ಸಂಗ್ರಹಾಲಯ ನಿರ್ದೇಶನಾಲಯ, ಹೊಸಪೇಟೆ, ಇವರ ಹೆಸರಿನಲ್ಲಿ ಪಾವತಿ ಮಾಡುವುದು.
7. ಟೆಂಡರ್ ಲಕೋಟೆಯನ್ನು ಸಲ್ಲಿಸುವಾಗ ನಿಗದಿತ ಇ.ಎಂ.ಡಿ. ಹಣವನ್ನು ಡಿ.ಡಿ. ಅಥವಾ ಬ್ಯಾಂಕ್ ಗ್ಯಾರಂಟಿ ರೂಪದಲ್ಲಿ ಸಲ್ಲಿಸದಿರುವಂತಹ ಟೆಂಡರ್‌ಗಳನ್ನು ಯಾವುದೇ ಕಾರಣ ನೀಡದೆ ತಿರಸ್ಕರಿಸಲಾಗುವುದು.
8. ಮೇಲಿನ ನಿಯಮಗಳ ಪ್ರಕಾರ ಅರ್ಹರಿರುವ ಗುತ್ತಿಗೆದಾರರಿಗೆ ಮಾತ್ರ ಖಾಲಿ ಟೆಂಡರ್ ಫಾರಂ ಕೊಡಲಾಗುವುದು.
9. ಹೆಚ್ಚಿನ ವಿವರಗಳು ಬೇಕಾಗಿದ್ದಲ್ಲಿ ಕಛೇರಿಯಿಂದ ಪಡೆದುಕೊಳ್ಳುವುದು.

ಸಹಿ/-

ಪಿ.ಆರ್. 351

ನಿರ್ದೇಶಕರು, ಪ್ರಾಚ್ಯವಸ್ತು ಮತ್ತು ಸಂಗ್ರಹಾಲಯಗಳ
ನಿರ್ದೇಶನಾಲಯ, ಹೊಸಪೇಟೆ.

## ಕಾರಾಗೃಹಗಳ ಉಪ ಮಹಾನಿರೀಕ್ಷಕರ ಕಛೇರಿ, ಕೇಂದ್ರ ಕಾರಾಗೃಹ, ಪರಪ್ಪನ ಅಗ್ರಹಾರ, ಬೆಂಗಳೂರು-100

## ಪ್ರಕಟಣೆ

### ಸಂಖ್ಯೆ: ಬೆಂಕೇಕಾ/ಕಾ.ನಿ/497/2004-05/3034, ದಿನಾಂಕ: 14ನೇ ಜುಲೈ 2004

ಈ ಮೂಲಕ ಸಾರ್ವಜನಿಕರಲ್ಲಿ ತಿಳಿಯಪಡಿಸುವುದೇನೆಂದರೆ, ಪರಪ್ಪನ ಅಗ್ರಹಾರ ಕೇಂದ್ರ ಕಾರಾಗೃಹ ಸಮುಚ್ಚಯದಲ್ಲಿನ ಅಂಗಡಿ ಮಳಿಗೆಗಳಿಗೆ ಟೆಂಡರ್ ಆಧಾರದ ಮೇಲೆ ಸ್ಪರ್ಧಾತ್ಮಕ ದರಗಳನ್ನು ಕರೆದು 2004-05ನೇ ಸಾಲಿಗೆ ಅಂಗಡಿ ಮಳಿಗೆಗಳನ್ನು ಬಾಡಿಗೆಗೆ ಪಡೆಯಲು ಬಹಿರಂಗ ಹರಾಜನ್ನು ದಿನಾಂಕ: 26.8.2004 ರಂದು ಬೆಳಿಗ್ಗೆ 11.00 ಗಂಟೆಗೆ ನಿಗದಿಪಡಿಸಿದೆ. ಸಾರ್ವಜನಿಕರು ಈ ಬಹಿರಂಗ ಹರಾಜಿನಲ್ಲಿ ಭಾಗವಹಿಸುವಂತೆ ಕೋರಿದೆ.

ಈ ಸಂಸ್ಥೆಯಲ್ಲಿ ಸುಮಾರು 3500 ಕ್ಕೂ ಹೆಚ್ಚಿನ ಬಂದಿಗಳಿದ್ದು, ಪ್ರತಿದಿನ (ಸರ್ಕಾರಿ ರಜಾ ದಿನಗಳನ್ನು ಹೊರತುಪಡಿಸಿ) ನೂರಾರು ಜನರು ಸಂದರ್ಶನಕ್ಕೆ ಬಂದು ಹೋಗುತ್ತಿರುತ್ತಾರೆ. ಅಲ್ಲದೆ 600 ಜನ ಸಿಬ್ಬಂದಿಗಳು ಇಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದು, ಸಮುಚ್ಚಯದಲ್ಲಿರುವ 187 ವಸತಿ ಗೃಹಗಳಲ್ಲಿ ಸಿಬ್ಬಂದಿಗಳು ವಾಸ ಇರುವುದರಿಂದ ಸದಾ ಜನದಟ್ಟಣೆಯಿಂದ ಕೂಡಿರುವ ಈ ಸ್ಥಳದಲ್ಲಿ ಅಂಗಡಿಮಳಿಗೆಗಳನ್ನು ನಡೆಸುವುದರಿಂದ ವ್ಯಾಪಾರಿ ಉದ್ದೇಶವು ಸಫಲವಾಗುವ ಭರವಸೆ ನೀಡುತ್ತಾ, ಆಸಕ್ತಿಯುಳ್ಳ ಸಾರ್ವಜನಿಕರು ಹರಾಜಿನಲ್ಲಿ ಹೆಚ್ಚಿನ ಸಂಖ್ಯೆಯಲ್ಲಿ ಭಾಗವಹಿಸುವಂತೆ ಕೋರಿದೆ.

**ಅಂಗಡಿ ಮಳಿಗೆಗಳು ತಿಂಗಳ ಬಾಡಿಗೆ ಮತ್ತು ಇತರೇ ವಿವರಗಳು ಈ ಕೆಳಕಂಡಂತೆ ಇರುತ್ತದೆ.**

| ಕ್ರ.ಸಂ. | ಅಂಗಡಿ ಮಳಿಗೆಗಳು | ತಿಂಗಳ ಬಾಡಿಗೆ | 10 ತಿಂಗಳ ಬಾಡಿಗೆಯಷ್ಟು ಭದ್ರತಾ ಠೇವಣಿ | ಹರಾಜಿನಲ್ಲಿ ಭರಿಸಬೇಕಾದ ಇಡುಪು ಠೇವಣಿ |
|---|---|---|---|---|
| 1 | ಸಲೂನ್ | 980.00 | ನಿಗದಿಯಾದ | 1000.00 |
| 2 | ತರಕಾರಿ ಮಳಿಗೆ (1 ಮತ್ತು 11) | 980.00 | ಬಾಡಿಗೆಯ 10 ತಿಂಗಳ | 1000.00 |
| 3 | ಬೇಕರಿ (2 ಯೂನಿಟ್) | 1,960.00 | ಮೊತ್ತವನ್ನು | 2000.00 |
| 4 | ಕೊಠಡಿ | 980.00 | ಠೇವಣಿಯಾಗಿ | 1000.00 |
| 5 | ವರ್ಕ್‌ಶಾಪ್ | 980.00 | ಇಡುವುದು | 1000.00 |

ಹೆಚ್ಚಿನ ಮಾಹಿತಿಗಳು ಮತ್ತು ನಿಬಂಧನೆಗಳ ವಿವರಗಳು ಬೇಕಾಗಿದ್ದಲ್ಲಿ ಕಾರಾಗೃಹಗಳ ಉಪ ಮಹಾನಿರೀಕ್ಷಕರು, ಕೇಂದ್ರ ಕಾರಾಗೃಹ, ಬೆಂಗಳೂರು, ಇವರಿಂದ ಕಛೇರಿ ಕೆಲಸದ ವೇಳೆಯಲ್ಲಿ ಪಡೆಯಬಹುದು.

ಹರಾಜಿನ ದರವನ್ನು ಅಂಗೀಕರಿಸುವ ಅಥವಾ ತಿರಸ್ಕರಿಸುವ ಅಧಿಕಾರ ಪೊಲೀಸ್ ಮಹಾನಿರ್ದೇಶಕರು ಮತ್ತು ಕಾರಾಗೃಹಗಳ ಮಹಾನಿರೀಕ್ಷಕರು, ಬೆಂಗಳೂರು ರವರ ಅಂತಿಮ ತೀರ್ಮಾನಕ್ಕೆ ಒಳಪಟ್ಟಿರುತ್ತದೆ.

ಕಾರಾಗೃಹಗಳ ಉಪ ಮಹಾನಿರೀಕ್ಷಕರು

ಪಿ.ಆರ್. 352 ಕೇಂದ್ರ ಕಾರಾಗೃಹ, ಬೆಂಗಳೂರು.

## ಪ್ರಾದೇಶಿಕ ಸಾರಿಗೆ ಅಧಿಕಾರಿಗಳ ಕಛೇರಿ, ಧಾರವಾಡ

## ಅಧಿಸೂಚನೆ

**ಸಂ: ಪಾಸಾಅ/ಧಾ/ಸಿಬ್ಬಂದಿ/ವಾಹನ ಟೆಂಡರ್/2004-05, ದಿನಾಂಕ: 3ನೇ ಜುಲೈ 2004**

ವಿಷಯ: ಪ್ರಾದೇಶಿಕ ಸಾರಿಗೆ ಅಧಿಕಾರಿಗಳು, ಧಾರವಾಡ ಈ ಕಛೇರಿಯ ನಿರುಪಯುಕ್ತ ವಾಹನ ಸಂಖ್ಯೆ: ಸಿಎಜಿ-4783 ಮತ್ತು ಜಂಟಿ ಸಾರಿಗೆ ಆಯುಕ್ತರು, ಪ್ರವರ್ತನ (ಉತ್ತರ), ಧಾರವಾಡರವರ ಜೀಪ್ ಸಂಖ್ಯೆ: ಎಂವೈಆರ್-8118 ವಾಹನಗಳನ್ನು ಟೆಂಡರ್-ಕಂ-ಬಹಿರಂಗ ಹರಾಜು ಮೂಲಕ ವಿಲೇವಾರಿ ಮಾಡುವ ಬಗ್ಗೆ.

ಉಲ್ಲೇಖ:
1) ಸಾರಿಗೆ ಆಯುಕ್ತರು, ಬೆಂಗಳೂರುರವರ ಪತ್ರ ಸಂಖ್ಯೆ: ಸಾಅ:ಪೀಕ-2/ವೈವ-476/2002-03, ದಿನಾಂಕ: 13.3.2003.
2) ಸಾರಿಗೆ ಆಯುಕ್ತರು, ಬೆಂಗಳೂರುರವರ ಪತ್ರ ಸಂಖ್ಯೆ: ಸಾಅ:ಪೀಕ-2/ವೈವ-416/2003-04, ದಿನಾಂಕ: 9.2.2004.
3) ಮಾನ್ಯ ಜಿಲ್ಲಾಧಿಕಾರಿಗಳು, ಧಾರವಾಡರವರ ಪತ್ರ ಸಂಖ್ಯೆ: ಆಡಳಿತ/ವಾಹನ/ಸಿಆರ್-7/2004-05, ದಿನಾಂಕ: 24.4.2004.

ಸಾರ್ವಜನಿಕ ಮಾಹಿತಿಗಾಗಿ ತಿಳಿಯಪಡಿಸುವುದೇನೆಂದರೆ, ಈ ಕಛೇರಿಯ ಕೆಳಕಂಡ ವಾಹನಗಳನ್ನು ಈ ಕಛೇರಿಯ ಆವರಣದಲ್ಲಿ ನಿರುಪಯುಕ್ತ ಸ್ಥಿತಿಯಲ್ಲಿ ನಿಲ್ಲಿಸಲಾಗಿದ್ದು, ಯಥಾಸ್ಥಿತಿಯಲ್ಲಿ ದಿನಾಂಕ: 13.8.2004 ರಂದು ಬೆಳಿಗ್ಗೆ 11.00 ಗಂಟೆಯಿಂದ ಈ ಕಛೇರಿಯ ಆವರಣದಲ್ಲಿ ಟೆಂಡರ್-ಕಂ-ಬಹಿರಂಗ ಹರಾಜು ಮೂಲಕ ಮಾರಾಟ ಮಾಡಲಾಗುವುದು.

| ಕ್ರಮ ಸಂಖ್ಯೆ | ವಾಹನ ನೋಂದಣಿ ಸಂಖ್ಯೆ | ವಾಹನದ ಮಾದರಿ |
|---|---|---|
| 1 | ಸಿಎಜಿ-4783 (ಮಹೀಂದ್ರ ಜೀಪ್ ಡೀಸೆಲ್) | 1989 |
| 2 | ಎಂವೈಆರ್-8118 (ಮಹೀಂದ್ರ ಜೀಪ್ ಡೀಸೆಲ್) | 1979 |

**ಹರಾಜಿನ ಷರತ್ತು ಮತ್ತು ನಿಬಂಧನೆಗಳು**

1. ಟೆಂಡರ್ ಫಾರಂ ಬೆಲೆ ರೂ. 100/- ಇದ್ದು, ಪ್ರಾದೇಶಿಕ ಸಾರಿಗೆ ಅಧಿಕಾರಿಗಳು, ಧಾರವಾಡರವರ ಹೆಸರಿನಲ್ಲಿ ಡಿಮ್ಯಾಂಡ್ ಡ್ರಾಫ್ಟ್ ಪಡೆದು ದಿನಾಂಕ: 1.8.2004 ರಿಂದ 10.8.2004 ರವರೆಗೆ ಕಛೇರಿಯಲ್ಲಿ ಪಡೆದು ದಿನಾಂಕ: 12.8.2004 ರ ಒಳಗೆ ಸಲ್ಲಿಸಲು ಸೂಚಿಸಿದೆ.
2. ಮೊಹರು ಮಾಡಿದ ಸೀಲ್ಡ್ ಟೆಂಡರ್ ಲಕೋಟೆಯನ್ನು (ಕವರನ್ನು) ಪ್ರಾದೇಶಿಕ ಸಾರಿಗೆ ಅಧಿಕಾರಿಗಳು, ಧಾರವಾಡರವರ ವಿಳಾಸಕ್ಕೆ ಕಳುಹಿಸಬೇಕು. ಲಕೋಟೆಯ ಮೇಲೆ ನಿರುಪಯುಕ್ತಗೊಳಿಸಿದ ಪ್ರಾದೇಶಿಕ ಸಾರಿಗೆ ಕಛೇರಿಯ ವಾಹನವನ್ನು ಖರೀದಿಸಿದ ಬಗ್ಗೆ ವಾಹನ ಸಂಖ್ಯೆಯನ್ನು ನಮೂದಿಸಬೇಕು.
3. ಪ್ರತಿಯೊಂದು ವಾಹನಕ್ಕೆ ಪ್ರತ್ಯೇಕವಾದ ಟೆಂಡರ್ ಫಾರ್ಮ್ ಹಾಗೂ ಲಕೋಟೆಯನ್ನು ಉಪಯೋಗಿಸತಕ್ಕದ್ದು.
4. ಪ್ರತಿಯೊಬ್ಬ ಟೆಂಡರ್‌ದಾರರು / ಸವಾಲುದಾರರು ವಾಹನವೊಂದಕ್ಕೆ ರೂ. 1000.00 (ಒಂದು ಸಾವಿರ ರೂಪಾಯಿಗಳು) ಠೇವಣಿ ಹಣವನ್ನು ನಗದು ರೂಪದಲ್ಲಿ ಪ್ರಾದೇಶಿಕ ಸಾರಿಗೆ ಅಧಿಕಾರಿಗಳು, ಧಾರವಾಡರವರ ಕಛೇರಿಯಲ್ಲಿ ಪಾವತಿಸಿ, ರಶೀದಿ ಪಡೆದು ರಶೀದಿಯನ್ನು ಅರ್ಜಿಯ ಜೊತೆ ನೀಡತಕ್ಕದ್ದು. ಠೇವಣಿ ಇಲ್ಲದ ಟೆಂಡರ್‌ಗಳನ್ನು ತಿರಸ್ಕರಿಸಲಾಗುವುದು.
5. ಟೆಂಡರ್ ಫಾರ್ಮ್‌ನಲ್ಲಿ ಅತಿ ಹೆಚ್ಚಿನ ದರವನ್ನು ಅಂಕಿ ಹಾಗೂ ಅಕ್ಷರಗಳೆರಡಲ್ಲಿಯೂ ಬರೆದಿರಬೇಕು. ಟೆಂಡರ್ ಫಾರ್ಮ್‌ನಲ್ಲಿ ಬೆಲೆಯನ್ನು ಬರೆಯುವಾಗ ಏನಾದರೂ ತಿದ್ದುಪಡಿ ಮಾಡಿದ್ದರೆ ಆ ಸ್ಥಳದಲ್ಲಿ ಟೆಂಡರ್‌ದಾರರು ಪೂರ್ಣ ಸಹಿ ಮಾಡತಕ್ಕದ್ದು.
6. ಟೆಂಡರ್ ಫಾರ್ಮ್‌ನ್ನು ವರ್ಗಾವಣೆ ಮಾಡಲಾಗುವುದಿಲ್ಲ.
7. ಪೂರ್ಣಗೊಳಿಸಿದ ಟೆಂಡರ್ ಫಾರ್ಮ್‌ಗಳನ್ನು ದಿನಾಂಕ: 12.8.2004ರ ಸಂಜೆ 4.00 ಗಂಟೆಯವರೆಗೆ ಸ್ವೀಕರಿಸಲಾಗುವುದು. ನಂತರ ಬಂದ ಟೆಂಡರ್ ಫಾರ್ಮ್‌ಗಳನ್ನು ತಿರಸ್ಕರಿಸಲಾಗುವುದು.

8. ಟೆಂಡರ್‌ದಾರರು ಸಹ ಬಹಿರಂಗ ಹರಾಜಿನಲ್ಲಿ ಹೆಚ್ಚಿನ ಠೇವಣಿ ಹಣವಿಲ್ಲದೆ ಭಾಗವಹಿಸಬಹುದು. ಠೇವಣಿ ತುಂಬಿದ ಠೇವಣಿದಾರರನ್ನು ಹೊರತುಪಡಿಸಿ, ಸವಾಲುದಾರರು ಹರಾಜು ಮಾಡಲ್ಪಡುವ ಪ್ರತಿ ವಾಹನಕ್ಕೆ ರೂ. 1000.00 ಠೇವಣಿಯನ್ನು ಸ್ಥಳದಲ್ಲಿಯೇ ಪಾವತಿಸತಕ್ಕದ್ದು.
9. ಪ್ರಾದೇಶಿಕ ಸಾರಿಗೆ ಅಧಿಕಾರಿಗಳು, ಧಾರವಾಡ ಅಥವಾ ಅವರಿಂದ ನೇಮಿಸಲ್ಪಟ್ಟ ಅಧಿಕಾರಿಗಳು ಬಹಿರಂಗ ಹರಾಜು ನಡೆಸುವವರು ಠೇವಣಿ ತುಂಬಿದ ಟೆಂಡರ್‌ದಾರರಿಗೆ / ಸವಾಲುದಾರರಿಗೆ ಮಾತ್ರ ಹರಾಜಿನಲ್ಲಿ ಭಾಗವಹಿಸಲು ಅವಕಾಶವಿರುತ್ತದೆ.
10. ಬಹಿರಂಗ ಹರಾಜಿನಲ್ಲಿ ಅತಿ ಹೆಚ್ಚಿನ ಬೆಲೆ (ದರವನ್ನು) ದಾಖಲುಗೊಳಿಸಿದ ನಂತರ ಸ್ವೀಕೃತವಾದ ಟೆಂಡರ್‌ಗಳನ್ನು ಕ್ರಮ ಸಂಖ್ಯೆ: 9 ರಲ್ಲಿನ ಅಧಿಕಾರಿಗಳು ಸಾರ್ವಜನಿಕ ಸಮಕ್ಷಮ ತೆರೆದು ಬಹಿರಂಗಪಡಿಸುವುದು. ಈ ಎರಡರಲ್ಲಿ ಅತೀ ಹೆಚ್ಚಿನ ದರವನ್ನು ಯಾರು ನಮೂದಿಸಿರುವವರೋ ಅವರನ್ನು ಯಶಸ್ವಿ ಟೆಂಡರ್ / ಬಹಿರಂಗ ಸವಾಲುದಾರರೆಂದು ಪರಿಗಣಿಸಲಾಗುವುದು. ಮೊದಲು ಬಹಿರಂಗ ಹರಾಜು ನಡೆಸಿದ ನಂತರ ಟೆಂಡರ್‌ಗಳನ್ನು ಪರಿಗಣಿಸಲಾಗುವುದು.
11. ಯಶಸ್ವಿಯಾದ ಟೆಂಡರ್ / ಸವಾಲುದಾರರು ವಾಹನಕ್ಕೆ ಹೆಚ್ಚಿನ ಬಿಡ್‌ನಲ್ಲಿ ಪೂರ್ಣ ಮೊತ್ತ ಚಾಲ್ತಿಯಲ್ಲಿರುವ ಮೋಟಾರು ವಾಹನ ಜೀವಾವಧಿ ತೆರಿಗೆ, ಹಸಿರು ತೆರಿಗೆ ಹಾಗೂ ಮಾರಾಟ ತೆರಿಗೆಯನ್ನು ಸರ್ಕಾರದ ನಿಯಮದಂತೆ ಸಂಪೂರ್ಣ ಪಾವತಿ ಮಾಡತಕ್ಕದ್ದು. ತದನಂತರ ಯಶಸ್ವಿ ಟೆಂಡರ್‌ದಾರರಿಗೆ / ಸವಾಲುದಾರರಿಗೆ ಕಛೇರಿಯಿಂದ ನೀಡಲಾಗುವ ದಾಖಲೆ ಪತ್ರಗಳ ಆಧಾರದ ಮೇಲೆ ಪ್ರಾದೇಶಿಕ ಸಾರಿಗೆ ಅಧಿಕಾರಿಗಳು. ಧಾರವಾಡರವರ ಕಛೇರಿಯಲ್ಲಿ ಮಾಲೀಕತ್ವ ಬದಲಾವಣೆ ಮಾಡಿಕೊಂಡ ನಂತರ ಬಿಡ್‌ದಾರರು ತಮ್ಮ ಸ್ವಂತ ಖರ್ಚಿನಿಂದ 7 ದಿನಗಳ ಒಳಗಾಗಿ ವಾಹನವನ್ನು ತಮ್ಮ ವಶಕ್ಕೆ ತೆಗೆದುಕೊಂಡು ಹೋಗಲು ಒಪ್ಪಿಗೆ ನೀಡಲಾಗುವುದು. ತಪ್ಪಿದಲ್ಲಿ ಅವರು ತುಂಬಿರುವ ಹಣವನ್ನು ಸರ್ಕಾರದ ವಶಕ್ಕೆ ಮುಟ್ಟುಗೋಲು ಹಾಕಿಕೊಳ್ಳಲಾಗುವುದು. ಹಾಗೂ ಮತ್ತೊಮ್ಮೆ ಹೊಸದಾಗಿ ಅಧಿಸೂಚನೆಯನ್ನು ಹೊರಡಿಸಿ, ಸದರಿ ವಾಹನದ ಬಹಿರಂಗ ಹರಾಜು ಮಾಡಲಾಗುವುದು.
12. ಅತಿ ಹೆಚ್ಚಿನ ಮೊತ್ತಕ್ಕೆ ಕೇಳಿದ ಟೆಂಡರ್‌ದಾರರು / ಸವಾಲುದಾರರು ಒಪ್ಪಿಕೊಂಡ ನಂತರ ನಿರಾಕರಿಸಿದರೆ ಅವರು ತುಂಬಿದ ಹಣವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲಾಗುವುದು. ಅಲ್ಲದೇ ಮತ್ತೊಮ್ಮೆ ಹೊಸದಾಗಿ ಅಧಿಸೂಚನೆಯನ್ನು ಹೊರಡಿಸಿ, ಬಹಿರಂಗ ಹರಾಜು ಮಾಡಲಾಗುವುದು.
13. ಯಶಸ್ವಿ ಬಿಡ್‌ದಾರರು ಸಂಪೂರ್ಣ ಹಣವನ್ನು ನಗದು ರೂಪದಲ್ಲಾಗಲಿ, ಡಿ.ಡಿ. ಮೂಲಕ ತುಂಬಿ ರಶೀದಿ ಪಡೆಯಬಹುದು.
14. ಹರಾಜು ಮುಗಿದ ನಂತರ ಯಶಸ್ವಿಯಾಗದ ಟೆಂಡರ್‌ದಾರರಿಗೆ / ಸವಾಲುದಾರರಿಗೆ ಠೇವಣಿ ಹಣವನ್ನು ಸ್ಥಳದಲ್ಲಿಯೇ ಹಿಂದಿರುಗಿಸಲಾಗುವುದು.
15. ಹರಾಜು ಮಾಡುವ ವೇಳೆಯಲ್ಲಿ ಏನಾದರೂ ತಕರಾರುಗಳು ಬಂದಲ್ಲಿ ಪ್ರಾದೇಶಿಕ ಸಾರಿಗೆ ಅಧಿಕಾರಿಗಳು ಅಥವಾ ಅವರಿಂದ ನೇಮಿಸಲ್ಪಟ್ಟ ಅಧಿಕಾರಿಗಳು ಕೈಗೊಳ್ಳುವ ನಿರ್ಣಯವೇ ಅಂತಿಮವಾಗಿರುತ್ತದೆ.
16. ಸವಾಲನ್ನು / ಟೆಂಡರ್‌ನ್ನು ಯಾವುದೇ ಕಾರಣಕ್ಕಾಗಿ ರದ್ದುಗೊಳಿಸುವ ಅಥವಾ ಅಂಗೀಕರಿಸುವ ಅಥವಾ ಮುಂದೂಡುವ ಅಧಿಕಾರವನ್ನು ಪ್ರಾದೇಶಿಕ ಸಾರಿಗೆ ಅಧಿಕಾರಿಗಳು ಹೊಂದಿರುತ್ತಾರೆ. ಯಾವುದೇ ವಾದ-ವಿವಾದ ಉದ್ಭವಿಸಿದಲ್ಲಿ ಜಿಲ್ಲಾಧಿಕಾರಿಗಳು ಮತ್ತು ಅಧ್ಯಕ್ಷರು, ಜಿಲ್ಲಾಮಟ್ಟದ ಅನುಪಯುಕ್ತ ಸರ್ಕಾರಿ ವಾಹನಗಳ ವಿಲೇವಾರಿ ಸಮಿತಿ, ಧಾರವಾಡರವರು ನೀಡುವ ನಿರ್ಣಯವೇ ಅಂತಿಮವಾಗಿರುತ್ತದೆ.
17. ಇಚ್ಛೆಯುಳ್ಳವರು ಹರಾಜು ಮಾಡಲ್ಪಡುವ ಈ ನಿರುಪಯುಕ್ತ ವಾಹನಗಳನ್ನು ಪ್ರಾದೇಶಿಕ ಸಾರಿಗೆ ಅಧಿಕಾರಿಗಳ ಕಛೇರಿ, ಧಾರವಾಡರವರ ಕಛೇರಿಯ ಆವರಣದಲ್ಲಿ ನಿಲ್ಲಿಸಲಾಗಿದ್ದು, ಕಛೇರಿಯ ವೇಳೆಯಲ್ಲಿ ಆಗಮಿಸಿ ನೋಡಬಹುದು.

ಪಿ.ಆರ್. 353 ಪ್ರಾದೇಶಿಕ ಸಾರಿಗೆ ಅಧಿಕಾರಿ, ಧಾರವಾಡ.

**KARNATAKA STATE BAR COUNCIL, OLD K.G.I.D. BLDG., BANGALORE-1**

**NOTIFICATION**

**No. 4/2004, Dated 25th July 2004**

As per Rule 12 of "The Karnataka Stae Bar Council (Election of Chairman) Rules 1978", it is declared that the following Members of the Council have been elected to the Office of the Chairman & Vice Chairman:

**CHAIRMAN**

| Sl.No. | Name of the Candidates | Address |
|---|---|---|
| 1 | Mulawadmath Anilkumar Gurupadayya | "Parwati" Kanabargi Road, M.M. Extension, Mahantesh Nagar, Belgaum-16. Phone: Res: 453030, STD: 0831, Mobile: 9844049918 |

**VICE-CHAIRMAN**

| Sl.No. | Name of the Candidates | Address |
|---|---|---|
| 1 | Patil Channabasayya Rudrayya | 'Om', No. 12, Vikas Nagar, Hubli. Phone: Off & Res: 2375666 STD: 0836 |

**M.P. Jakaty**
Returning Officer, K.S.B.C., Bangalore-1.
Secretary
Karnataka State Bar Council,
Old KGID Bldg., Bangalore-1.

PD-50

## ತೋಟಗಾರಿಕೆ ಇಲಾಖೆ
## ಹಿರಿಯ ಸಹಾಯಕ ತೋಟಗಾರಿಕೆ ನಿರ್ದೇಶಕರ ಕಛೇರಿ, ರಾಜ್ಯವಲಯ, ಶಿವಮೊಗ್ಗ
## ಟೆಂಡರ್-ಯಾ-ಬಹಿರಂಗ ಹರಾಜು ಪ್ರಕಟಣೆ

**ಸಂಖ್ಯೆ: ಹಿಸತೋನಿ:ರಾವ:ಶಿ:ತಾಂಸ:456:2004-05, ದಿನಾಂಕ: 17ನೇ ಜುಲೈ 2004**

**ವಿಷಯ:** ಹಿರಿಯ ಸಹಾಯಕ ತೋಟಗಾರಿಕೆ ನಿರ್ದೇಶಕರು (ರಾಜ್ಯವಲಯ), ಶಿವಮೊಗ್ಗ ರವರ ಅಧೀನದಲ್ಲಿ ಬರುವ ಜಿಲ್ಲೆಯ ವಿವಿಧ ರಾಜ್ಯವಲಯ ತೋಟಗಾರಿಕಾ ಕ್ಷೇತ್ರ : ನರ್ಸರಿಗಳಲ್ಲಿನ ವಿವಿಧ ಫಸಲುಗಳನ್ನು ಟೆಂಡರ್-ಯಾ-ಬಹಿರಂಗ ಹರಾಜು ಮೂಲಕ ವಿಲೇವಾರಿ ಮಾಡಲು ಈ ಕೆಳಗಿನ ದಿನಾಂಕಗಳನ್ನು ನಿಗದಿಪಡಿಸಿರುವ ಬಗ್ಗೆ.

| ಕ್ರ. ಸಂ. | ತೋಟಗಾರಿಕೆ ಕ್ಷೇತ್ರ : ನರ್ಸರಿಯ ಹೆಸರು | ಫಸಲಿನ | | ಟೆಂಡರ್ ಫಾರಂ ಪಡೆಯುವ ಕೊನೆಯ ದಿನಾಂಕ ಮತ್ತು ವೇಳೆ | ಟೆಂಡರ್ ಸಲ್ಲಿಸಲು ಕೊನೆಯ ದಿನಾಂಕ ಮತ್ತು ವೇಳೆ | ಟೆಂಡರ್-ಯಾ-ಬಹಿರಂಗ ಹರಾಜನ್ನು ನಡೆಸುವ ದಿನಾಂಕ ಮತ್ತು ವೇಳೆ | ಟೆಂಡರ್-ಯಾ ಬಹಿರಂಗ ಹರಾಜು ನಡೆಯುವ ಸ್ಥಳ | ಇ.ಎಂ.ಡಿ. ಮೊತ್ತ ರೂ. ಪೈ. | ಷರಾ |
|---|---|---|---|---|---|---|---|---|---|
| | | ಹೆಸರು | ಅವಧಿ | | | | | | |
| 1 | 2 | 3 | | 4 | 5 | 6 | 7 | 8 | 9 |
| 1 | ಎ) ಬೇಲಿಮಲ್ಲೂರು ತೋಟಗಾರಿಕೆ ಕ್ಷೇತ್ರ (ರಾವ), ಹೊನ್ನಾಳಿ ತಾ: | ಸಪೋಟ | 1.7.2004 ರಿಂದ 31.12.2004 | 17.8.2004 ಸಂಜೆ 5.00 ಗಂಟೆಯೊಳಗೆ | 18.8.2004 ಬೆಳಿಗ್ಗೆ 11.00 ಗಂಟೆಗೆ | 18.8.2004 ಮಧ್ಯಾಹ್ನ 12.00 ಗಂಟೆ | ಹಿರಿಯ ಸಹಾಯಕ ತೋಟಗಾರಿಕೆ ನಿರ್ದೇಶಕರು (ರಾವ), ಶಿವಮೊಗ್ಗ ಇವರ ಕಛೇರಿ | 20000.00 | |
| | ಬಿ) ಬೇಲಿಮಲ್ಲೂರು, ಡಿ.ಎಲ್.ಡಿ.ಬಿ, ತೋಟಗಾರಿಕೆ ಕ್ಷೇತ್ರ, ಹೊನ್ನಾಳಿ ತಾ: | ಸಪೋಟ | 1.7.2004 ರಿಂದ 31.12.2004 | 17.8.2004 ಸಂಜೆ 5.00 ಗಂಟೆಯೊಳಗೆ | 18.8.2004 ಬೆಳಿಗ್ಗೆ 11.30 ಗಂಟೆಗೆ | 18.8.2004 ಮಧ್ಯಾಹ್ನ 12.30 ಗಂಟೆಗೆ | -”- | 2000.00 | |
| 2 | ಎ) ಕುರುವಳ್ಳಿ ತೋಟಗಾರಿಕೆ ಕ್ಷೇತ್ರ, ತೀರ್ಥಹಳ್ಳಿ | ಸಪೋಟ | 1.7.2004 ರಿಂದ 31.12.2004 | 18.8.2004 ಸಂಜೆ 5.00 ಗಂಟೆಯೊಳಗೆ | 19.8.2004 ಬೆಳಿಗ್ಗೆ 11.00 ಗಂಟೆಗೆ | 19.8.2004 ಮಧ್ಯಾಹ್ನ 12.30 ಗಂಟೆಗೆ | ಕುರುವಳ್ಳಿ ತೋಟಗಾರಿಕೆ ಕ್ಷೇತ್ರ, ತೀರ್ಥಹಳ್ಳಿ | 5000.00 | |
| | ಬಿ) ಸೀಬಿನಕೆರೆ ತೋಟಗಾರಿಕೆ ಕ್ಷೇತ್ರ, ತೀರ್ಥಹಳ್ಳಿ | ಸಪೋಟ | 1.7.2004 ರಿಂದ 31.12.2004 | 18.8.2004 ಸಂಜೆ 5.00 ಗಂಟೆಯೊಳಗೆ | 19.8.2004 ಬೆಳಿಗ್ಗೆ 11.30 ಗಂಟೆಗೆ | 19.8.2004 ಮಧ್ಯಾಹ್ನ 12.30 ಗಂಟೆಗೆ | -”- | 1000.00 | |
| 3 | ಬಿ.ಆರ್.ಪಿ. ತೋಟಗಾರಿಕೆ ಕ್ಷೇತ್ರ, ಭದ್ರಾವತಿ ತಾ: | ಸೀಬೆ | 1.7.2004 ರಿಂದ 31.12.2004 ರವರೆಗೆ | 21.8.2004 ಸಂಜೆ 5.00 ಗಂಟೆಯವರೆಗೆ | 23.8.2004 ಬೆಳಿಗ್ಗೆ 11.00 ಗಂಟೆಗೆ | 23.8.2004 ಮಧ್ಯಾಹ್ನ 12.00 ಗಂಟೆಗೆ | ಬಿ.ಆರ್.ಪಿ. ತೋಟಗಾರಿಕೆ ಕ್ಷೇತ್ರ | 500.00 | |
| | | ಸಪೋಟ | 1.7.2004 ರಿಂದ 31.12.2004 ವರೆಗೆ | 21.8.2004 ಸಂಜೆ 5.00 ಗಂಟೆಯವರೆಗೆ | 23.8.2004 ಬೆಳಿಗ್ಗೆ 11.30 ಗಂಟೆಗೆ | 23.8.2004 ಮಧ್ಯಾಹ್ನ 12.30 ಗಂಟೆಗೆ | -”- | 1000.00 | |

| ಕ್ರ. ಸಂ. | ತೋಟಗಾರಿಕೆ ಕ್ಷೇತ್ರ : ನರ್ಸರಿಯ ಹೆಸರು | ಫಸಲಿನ | | ಟೆಂಡರ್ ಫಾರಂ ಪಡೆಯುವ ಕೊನೆಯ ದಿನಾಂಕ ಮತ್ತು ವೇಳೆ | ಟೆಂಡರ್ ಸಲ್ಲಿಸಲು ಕೊನೆಯ ದಿನಾಂಕ ಮತ್ತು ವೇಳೆ | ಟೆಂಡರ್-ಯಾ-ಬಹಿರಂಗ ಹರಾಜನ್ನು ನಡೆಸುವ ದಿನಾಂಕ ಮತ್ತು ವೇಳೆ | ಟೆಂಡರ್-ಯಾ ಬಹಿರಂಗ ಹರಾಜು ನಡೆಯುವ ಸ್ಥಳ | ಇ.ಎಂ.ಡಿ. ಮೊತ್ತ ರೂ. ಪೈ. | ಷರಾ |
|---|---|---|---|---|---|---|---|---|---|
| | | ಹೆಸರು | ಅವಧಿ | | | | | | |
| 4 | ಯಳವರಸಿ ತೋಟಗಾರಿಕೆ ಕ್ಷೇತ್ರ, ಸಾಗರ ತಾ: | ಸಪೋಟ | 1.7.2004 ರಿಂದ 31.12.2004 ವರೆಗೆ | 23.8.2004 ಸಂಜೆ 5.00 ಗಂಟೆಗೆ | 24.8.2004 ಬೆಳಿಗ್ಗೆ 11.00 ಗಂಟೆಗೆ | 24.8.2004 ಮಧ್ಯಾಹ್ನ 12.00 ಗಂಟೆಗೆ | ಯಳವರಸಿ ತೋಟಗಾರಿಕೆ ಕ್ಷೇತ್ರ, ಸಾಗರ | 5000.00 | |
| 5 | ಕೊಡಕಣಿ ತೋಟಗಾರಿಕೆ ಕ್ಷೇತ್ರ, ಸೊರಬ ತಾ: | ಸಪೋಟ | 1.7.2004 ರಿಂದ 31.12.2004 ವರೆಗೆ | 24.8.2004 ಸಂಜೆ 5.00 ಗಂಟೆಯವರೆಗೆ | 25.8.2004 ಬೆಳಿಗ್ಗೆ 11.00 ಗಂಟೆಗೆ | 25.8.2004 ಮಧ್ಯಾಹ್ನ 12.00 ಗಂಟೆಗೆ | ಕೊಡಕಣಿ ತೋಟಗಾರಿಕೆ ಕ್ಷೇತ್ರ, ಸೊರಬ | 5000.00 | |
| | | ಸೀಬೆ | 1.7.2004 ರಿಂದ 31.12.2004 ವರೆಗೆ | 24.8.2004 ಸಂಜೆ 5.00 ಗಂಟೆಯವರೆಗೆ | 25.8.2004 ಬೆಳಿಗ್ಗೆ 11.30 ಗಂಟೆಗೆ | 25.8.2004 ಮಧ್ಯಾಹ್ನ 12.30 ಗಂಟೆಗೆ | ಕೊಡಕಣಿ ತೋಟಗಾರಿಕೆ ಕ್ಷೇತ್ರ, ಸೊರಬ | 1000.00 | |
| 6 | ಕಾಳೇನಹಳ್ಳಿ ತೋಟಗಾರಿಕೆ ಕ್ಷೇತ್ರ, ಶಿಕಾರಿಪುರ ತಾ: | ಸಪೋಟ | 1.7.2004 ರಿಂದ 31.12.2004 ವರೆಗೆ | 25.8.2004 ಸಂಜೆ 5.00 ಗಂಟೆಯವರೆಗೆ | 26.8.2004 ಬೆಳಿಗ್ಗೆ 11.00 ಗಂಟೆಗೆ | 26.8.2004 ಮಧ್ಯಾಹ್ನ 12.00 ಗಂಟೆಗೆ | ಕಾಳೇನಹಳ್ಳಿ ತೋಟಗಾರಿಕೆ ಕ್ಷೇತ್ರ, ಶಿಕಾರಿಪುರ | 1000.00 | |
| | | ಸೀಬೆ | 1.7.2004 ರಿಂದ 31.12.2004 ವರೆಗೆ | 25.8.2004 ಸಂಜೆ 5.00 ಗಂಟೆಯವರೆಗೆ | 26.8.2004 ಬೆಳಿಗ್ಗೆ 11.30 ಗಂಟೆಗೆ | 26.8.2004 ಮಧ್ಯಾಹ್ನ 12.00 ಗಂಟೆಗೆ | ಕಾಳೇನಹಳ್ಳಿ ತೋಟಗಾರಿಕೆ ಕ್ಷೇತ್ರ, ಶಿಕಾರಿಪುರ | 500.00 | |
| 7 | ಸಿ. ಕಾಂಪೌಂಡ್ ತೋಟಗಾರಿಕೆ ಕ್ಷೇತ್ರ, ಶಿವಮೊಗ್ಗ | ಸಪೋಟ | 1.7.2004 ರಿಂದ 31.12.2004 ವರೆಗೆ | 28.8.2004 ಸಂಜೆ 5.00 ಗಂಟೆಯವರೆಗೆ | 30.8.2004 ಬೆಳಿಗ್ಗೆ 11.00 ಗಂಟೆಗೆ | 30.8.2004 ಮಧ್ಯಾಹ್ನ 12.30 ಗಂಟೆಗೆ | ಹಿರಿಯ ಸಹಾಯಕ ತೋಟಗಾರಿಕೆ ನಿರ್ದೇಶಕರ ಕಛೇರಿ (ರಾಜ್ಯ ವಲಯ), ಶಿವಮೊಗ್ಗ | 5000.00 | |
| | | ಸೀಬೆ | 1.7.2004 ರಿಂದ 31.12.2004 ವರೆಗೆ | 28.8.2004 ಸಂಜೆ 5.00 ಗಂಟೆಯವರೆಗೆ | 30.8.2004 ಬೆಳಿಗ್ಗೆ 11.30 ಗಂಟೆಗೆ | 30.8.2004 ಮಧ್ಯಾಹ್ನ 1.00 ಗಂಟೆಗೆ | ಹಿರಿಯ ಸಹಾಯಕ ತೋಟಗಾರಿಕೆ ನಿರ್ದೇಶಕರ ಕಛೇರಿ (ರಾಜ್ಯ ವಲಯ), ಶಿವಮೊಗ್ಗ | 5000.00 | |

| ಕ್ರ. ಸಂ. | ತೋಟಗಾರಿಕೆ ಕ್ಷೇತ್ರ : ನರ್ಸರಿಯ ಹೆಸರು | ಫಸಲಿನ | | ಟೆಂಡರ್ ಫಾರಂ ಪಡೆಯುವ ಕೊನೆಯ ದಿನಾಂಕ ಮತ್ತು ವೇಳೆ | ಟೆಂಡರ್ ಸಲ್ಲಿಸಲು ಕೊನೆಯ ದಿನಾಂಕ ಮತ್ತು ವೇಳೆ | ಟೆಂಡರ್-ಯಾ-ಬಹಿರಂಗ ಹರಾಜನ್ನು ನಡೆಸುವ ದಿನಾಂಕ ಮತ್ತು ವೇಳೆ | ಟೆಂಡರ್-ಯಾ ಬಹಿರಂಗ ಹರಾಜು ನಡೆಯುವ ಸ್ಥಳ | ಇ.ಎಂ.ಡಿ. ಮೊತ್ತ ರೂ. ಪೈ. | ಷರಾ |
|---|---|---|---|---|---|---|---|---|---|
| | | ಹೆಸರು | ಅವಧಿ | | | | | | |
| 8 | ತುಂಗಾ ತೋಟಗಾರಿಕೆ ಕ್ಷೇತ್ರ, ಶಿವಮೊಗ್ಗ | ಸಪೋಟ | 1.7.2004 ರಿಂದ 31.12.2004 ವರೆಗೆ | 28.8.2004 ಸಂಜೆ 5.00 ಗಂಟೆಯವರೆಗೆ | 30.8.2004 ಬೆಳಿಗ್ಗೆ 12.30 ಗಂಟೆಗೆ | 30.8.2004 ಮಧ್ಯಾಹ್ನ 1.30 ಗಂಟೆಗೆ | ಹಿರಿಯ ಸಹಾಯಕ ತೋಟಗಾರಿಕೆ ನಿರ್ದೇಶಕರ ಕಛೇರಿ (ರಾಜ್ಯ ವಲಯ), ಶಿವಮೊಗ್ಗ | | |

**ಟೆಂಡರ್-ಯಾ-ಬಹಿರಂಗ ಹರಾಜಿನಲ್ಲಿ ಭಾಗವಹಿಸಲು ಪಾಲಿಸಬೇಕಾದ ನಿಯಮ ಮತ್ತು ಷರತ್ತುಗಳು**

1. ಟೆಂಡರ್ ಫಾರಂಗಳನ್ನು 25.00 (ರೂ. ಇಪ್ಪತ್ತೈದು) ಪಾವತಿ ಮಾಡಿ ಪಡೆಯತಕ್ಕದ್ದು.
2. ಟೆಂಡರ್-ಯಾ-ಬಹಿರಂಗ ಹರಾಜಿನಲ್ಲಿ ಭಾಗವಹಿಸುವವರು ನಿಗದಿಪಡಿಸಿದ ಠೇವಣಿ ಮೊತ್ತ ಮತ್ತು ಫಸಲಿಗೆ ನಮೂದಿಸಿರುವ ಟೆಂಡರ್ ಮೊತ್ತದ ಶೇಕಡ 50 ಭಾಗದ ಮೊತ್ತವನ್ನು ಅಡ್ಡಗೆರೆ (ಕ್ರಾಸ್ ಮಾಡಿದ) ಎಳೆದ ಡಿಮ್ಯಾಂಡ್ ಡ್ರಾಫ್ಟ್ ರೂಪದಲ್ಲಿ ಆಯಾಯ ತೋಟಗಾರಿಕೆ ಕ್ಷೇತ್ರದ ಅಧಿಕಾರಿಗಳ ಪದನಾಮದಲ್ಲಿ ತೆಗೆಯಬೇಕು ಹಾಗೂ ಕಡ್ಡಾಯವಾಗಿ ಲಗತ್ತಿಸಬೇಕು.
3. ಟೆಂಡರ್ ಫಾರಂನಲ್ಲಿ ಪೂರ್ಣ ಹೆಸರು, ವಿಳಾಸ, ಟೆಂಡರ್ ಮೊತ್ತ (ಅಂಕಿಗಳಲ್ಲಿ ಅಕ್ಷರಗಳಲ್ಲಿ ಪ್ರತ್ಯೇಕವಾಗಿ) ಇತ್ಯಾದಿಗಳನ್ನು ಸಂಪೂರ್ಣವಾಗಿ ದಾಖಲಿಸಿ ಸಹಿ ಮಾಡಿರಬೇಕು. ಇಲ್ಲದಿದ್ದರೆ, ಅಪೂರ್ಣ ಟೆಂಡರ್ ಎಂದು ಪರಿಗಣಿಸಿ ಅಂತಹ ಟೆಂಡರ್‌ಗಳನ್ನು ತಿರಸ್ಕರಿಸಲಾಗುವುದು.
4. ಭರ್ತಿ ಮಾಡಿದ ಮೊಹರಾದ ಟೆಂಡರ್ ಫಾರಂಗಳನ್ನು ಹರಾಜು ನಡೆಸುವ ದಿನಾಂಕ ಹಾಗೂ ಟೆಂಡರ್-ಯಾ-ಬಹಿರಂಗ ಹರಾಜಿನ ಸಮಯದ ಒಂದು ಗಂಟೆಗೆ ಮುಂಚೆ ಆಯಾಯ ತೋಟಗಾರಿಕೆ ಕ್ಷೇತ್ರಗಳಲ್ಲಿ ಸಲ್ಲಿಸಬೇಕು (ಹೊನ್ನಾಳಿ ಬೇಲಿ ಮಲ್ಲೂರು ತೋಟಗಾರಿಕೆ ಕ್ಷೇತ್ರದ ಟೆಂಡರ್-ಯಾ-ಬಹಿರಂಗ ಹರಾಜು ಶಿವಮೊಗ್ಗ ರಾಜ್ಯವಲಯದ ಕಛೇರಿಯಲ್ಲಿ ನಡೆಯುವುದರಿಂದ, ಶಿವಮೊಗ್ಗದಲ್ಲಿ ಸಂಬಂಧಿಸಿದ ಅಧಿಕಾರಿಗಳಿಗೆ ಸಲ್ಲಿಸಬೇಕು).
5. ಬಹಿರಂಗ ಹರಾಜಿನಲ್ಲಿ ಬಿಡ್ಡು ಮಾಡುವವರು ಸಹ ನಿಗದಿಪಡಿಸಿದ ಠೇವಣಿ ಹಣವನ್ನು ಡಿ.ಡಿ. ರೂಪದಲ್ಲಿ ಸಲ್ಲಿಸಿ ಬಿಡ್ಡು ಮಾಡಲು ಅರ್ಹತೆ ಪಡೆಯಬೇಕು, ನಗದು ಹಣವನ್ನು ಸ್ವೀಕರಿಸಲಾಗುವುದಿಲ್ಲ.
6. ಟೆಂಡರ್ ಹಾಗೂ ಬಿಡ್ಡಿನ ಮೊತ್ತವನ್ನು (ಬಹಿರಂಗ ಹರಾಜು) ಅತಿ ಹೆಚ್ಚಿನ ಮೊತ್ತವಾದ ಒಂದನ್ನು ಮಾತ್ರ ಪರಿಗಣಿಸಲಾಗುವುದು. ಅತಿ ಹೆಚ್ಚಿನ ಮೊತ್ತದ ಬಿಡ್ಡುದಾರರು ಸಹ ಬಿಡ್ಡಿನ ಮೊತ್ತದ ಶೇಕಡಾ 50 ಭಾಗದ ಮೊತ್ತವನ್ನು ಸ್ಥಳದಲ್ಲಿ ಡಿ.ಡಿ. ರೂಪದಲ್ಲಿ ಪಾವತಿಸತಕ್ಕದ್ದು.
7. ಮೇಲಿನ ಕ್ಷೇತ್ರಗಳ ಫಸಲನ್ನು ಟೆಂಡರ್-ಯಾ-ಬಹಿರಂಗ ಹರಾಜು ಅನುಮೋದನೆಯಾದ ದಿನಾಂಕದ ನಂತರ ಪೂರ್ಣ ಮೊತ್ತ ಪಾವತಿಸಿ ಫಸಲನ್ನು ರೂಢಿಸಿಕೊಳ್ಳಬಹುದು (ಕಟಾವು ಮಾಡಿಕೊಳ್ಳುವುದು).
8. ಸದರಿ ಟೆಂಡರ್-ಯಾ-ಬಹಿರಂಗ ಹರಾಜು ಪ್ರಕ್ರಿಯೆಯನ್ನು ಅಂಗೀಕರಿಸುವ ಅಥವಾ ತಿರಸ್ಕರಿಸುವ ಅಧಿಕಾರವನ್ನು ತೋಟಗಾರಿಕೆ ನಿರ್ದೇಶಕರವರು ಪಡೆದಿರುತ್ತಾರೆ.
9. ಫಸಲನ್ನು ವೀಕ್ಷಿಸುವವರು ಆಯಾಯ ತೋಟಗಾರಿಕಾ ಕ್ಷೇತ್ರಗಳಿಗೆ ಭೇಟಿ ನೀಡಿ ಫಸಲನ್ನು ವೀಕ್ಷಿಸಬಹುದು.
10. ಯಶಸ್ವಿ ಟೆಂಡರ್‌ದಾರರು ಅಥವಾ ಹೆಚ್ಚಿನ ಬಿಡ್ಡುದಾರರು ಇಲಾಖೆಯಿಂದ ನಿಯಮಗಳನ್ನೊಳಗೊಂಡ ಕರಾರು ಪತ್ರವನ್ನು ಸಹಿ ಹಾಕಿ ಕರಾರು ಮಾಡಿಕೊಳ್ಳಬೇಕು.
11. ಫಸಲು ಯಾವುದೇ ಪ್ರಕೃತಿ ವಿಕೋಪಕ್ಕೆ ಹಾನಿಯಾದರೆ ಇಲಾಖೆಯು ಜವಾಬ್ದಾರಿಯಲ್ಲ, ಹಾಗೂ ಯಾವುದೇ ಪರಿಸ್ಥಿತಿಯಲ್ಲಿ ಹಣ ಹಿಂತಿರುಗಿಸಲಾಗುವುದಿಲ್ಲ.
12. ಫಸಲಿನ ಕಾವಲು ಕಟ್ಟಳೆಗಳನ್ನು ಟೆಂಡರ್-ಯಾ-ಬಿಡ್ಡುದಾರರು ನೋಡಿಕೊಳ್ಳಬೇಕು.
13. ಫಸಲನ್ನು ಕಟಾವು ಮಾಡಿಕೊಳ್ಳುವ ಅವಧಿಗೆ ಕಟಾವು ಸೀಮಿತಗೊಳ್ಳಬೇಕು.
14. ಹೆಚ್ಚಿನ ಮಾಹಿತಿಗಾಗಿ ಇಲಾಖೆ ಕಛೇರಿ ಕ್ಷೇತ್ರಗಳ ಅಧಿಕಾರಿಗಳನ್ನು ಭೇಟಿಯಾಗಬಹುದು.

ಹಿರಿಯ ಸಹಾಯಕ ತೋಟಗಾರಿಕೆ ನಿರ್ದೇಶಕರು,
(ರಾಜ್ಯವಲಯ), ಶಿವಮೊಗ್ಗ ಜಿಲ್ಲೆ, ಶಿವಮೊಗ್ಗ

ಪಿ.ಆರ್. 350

**ಉಪ ಅರಣ್ಯ ಸಂರಕ್ಷಣಾಧಿಕಾರಿಗಳು, ಬನ್ನೇರುಘಟ್ಟ ರಾಷ್ಟ್ರೀಯ ಉದ್ಯಾನವನ, ಬೆಂಗಳೂರು ಇವರ ಕಛೇರಿ**

**ಟೆಂಡರ್ ಪ್ರಕಟಣೆ ಸಂಖ್ಯೆ: ಬರಾಉ/ಚೆಕ್‌ಡ್ಯಾಂ/ಸಿಆರ್. /2004-05, ದಿನಾಂಕ: 13ನೇ ಜುಲೈ 2004**

**ವಿಷಯ:** ಚೆಕ್‌ಡ್ಯಾಂ ಗಳ ನಿರ್ಮಾಣಕ್ಕಾಗಿ ಟೆಂಡರ್ ಪ್ರಕಟಣೆ - ಬಗ್ಗೆ.

ಬನ್ನೇರುಘಟ್ಟ ರಾಷ್ಟ್ರೀಯ ಉದ್ಯಾನವನ ವಿಭಾಗದ ಶೆಡ್ಯೂಲ್‌ನಲ್ಲಿ ಸೂಚಿಸಿರುವ ಘಟಕಗಳಲ್ಲಿ 2004-05ನೇ ಸಾಲಿನಲ್ಲಿ ಚೆಕ್‌ಡ್ಯಾಂಗಳನ್ನು ನಿರ್ಮಾಣ ಮಾಡಲು ದಿನಾಂಕ: 30.8.2004 ರಂದು ಮಧ್ಯಾಹ್ನ ಉಪ ಅರಣ್ಯ ಸಂರಕ್ಷಣಾಧಿಕಾರಿಗಳು, ಬನ್ನೇರುಘಟ್ಟ ರಾಷ್ಟ್ರೀಯ ಉದ್ಯಾನವನ, ಕಲ್ಕೆರೆ, ಬೆಂಗಳೂರು-83 ರವರ ಕಛೇರಿಯಲ್ಲಿ ಟೆಂಡರ್ ಕರೆಯಲಾಗಿದೆ. ಆಸಕ್ತಿಯುಳ್ಳವರು ಕೆಳಕಂಡ ನಿಬಂಧನೆಗಳಿಗೆ ಒಳಪಟ್ಟು ಟೆಂಡರ್‌ನಲ್ಲಿ ಭಾಗವಹಿಸಲು ಆಹ್ವಾನಿಸಿದೆ.

**ಶೆಡ್ಯೂಲ್**

| ಕ್ರ.ಸಂ. | ಘಟಕದ ಹೆಸರು | ಕಾರ್ಯನಿರ್ವಹಿಸುವ ಸ್ಥಳ ಹಾಗೂ ಕಾರ್ಯದ ವಿವರ | ಕೆಲಸದ ಅಂದಾಜು ವೆಚ್ಚ (ಲಕ್ಷಗಳಲ್ಲಿ) | ಟೆಂಡರ್ ನಮೂನೆಯೊಂದಿಗೆ ಲಗತ್ತಿಸಬೇಕಾದ ಇಎಂಡಿ |
|---|---|---|---|---|
| 1 | 2 | 3 | 4 | 5 |
| 1 | ಆನೇಕಲ್ ವನ್ಯಜೀವಿ ವಲಯ | ಚೆಕ್‌ಡ್ಯಾಂ ನಿರ್ಮಾಣ ಮಾಡುವುದು 1 ಸಂಖ್ಯೆ | 1.50 | ರೂ. 5000/- |
| 2 | ಬನ್ನೇರುಘಟ್ಟ ವನ್ಯಜೀವಿ ವಲಯ | ಚೆಕ್‌ಡ್ಯಾಂ ನಿರ್ಮಾಣ ಮಾಡುವುದು 1 ಸಂಖ್ಯೆ | 1.50 | ರೂ. 5000/- |
| 3 | ಹಾರೋಹಳ್ಳಿ ವನ್ಯಜೀವಿ ವಲಯ | ಚೆಕ್‌ಡ್ಯಾಂ ನಿರ್ಮಾಣ ಮಾಡುವುದು 1 ಸಂಖ್ಯೆ | 1.50 | ರೂ. 5000/- |

**ಷರತ್ತುಗಳು**

1. ಟೆಂಡರ್‌ನಲ್ಲಿ ಭಾಗವಹಿಸುವವರು ಮೊದಲು ಈ ವಿಭಾಗದಲ್ಲಿ ಅರಣ್ಯ ಗುತ್ತಿಗೆದಾರರಾಗಿ ನೋಂದಾಯಿಸಿರಬೇಕು.
2. ಟೆಂಡರ್‌ನಲ್ಲಿ ಭಾಗವಹಿಸುವವರು ಮೇಲೆ ಶೆಡ್ಯೂಲ್‌ನಲ್ಲಿ ಸೂಚಿಸಿರುವ ಇ.ಎಂ.ಡಿ. ಮೊತ್ತದ ಡಿ.ಡಿ.ಯನ್ನು ಟೆಂಡರ್ ನಮೂನೆಯೊಂದಿಗೆ ಲಗತ್ತಿಸಬೇಕು.
3. ಟೆಂಡರ್‌ನಲ್ಲಿ ಭಾಗವಹಿಸಿ ಸಫಲರಾದವರಿಗೆ ಈ ಕಛೇರಿಯಿಂದ ಕಾರ್ಯ ಆದೇಶವನ್ನು ನೀಡಲಾಗುವುದು.
4. ಸಫಲರಾದ ಟೆಂಡರ್‌ದಾರರು ಅವರಿಗೆ ವಹಿಸಿದ ಕಾರ್ಯವನ್ನು ಉತ್ತಮ ಗುಣಮಟ್ಟದಲ್ಲಿ ನಿರ್ವಹಿಸಬೇಕು.
5. ಇ.ಎಂ.ಡಿ. ಮೊತ್ತದ ಚೆಕ್/ನಗದು ಹಣವನ್ನು ಅಂಗೀಕರಿಸಲಾಗುವುದಿಲ್ಲ.
6. ಟೆಂಡರ್ ಅನ್ನು ಅಂಗೀಕರಿಸುವುದು / ನಿರಾಕರಿಸುವುದು ಕೆಳಗೆ ಸಹಿ ಮಾಡಿದವರ ಅಧಿಕಾರದಲ್ಲಿರುತ್ತದೆ.
7. ಟೆಂಡರ್‌ದಾರರು ನಿರ್ವಹಿಸಿದ ಕಾರ್ಯದ ಬಿಲ್ಲಿನ ಮೇಲೆ ಘಟಕಾಧಿಕಾರಿಗೆ ಸಹಿಯನ್ನು ಪಡೆದು ಹಣ ಪಾವತಿಗಾಗಿ ಬಿಲ್ಲುಗಳನ್ನು ಈ ಕಛೇರಿಗೆ ಸಲ್ಲಿಸುವುದು.
8. ಬಿಲ್ಲಿನ ಹಣವನ್ನು ಲಭ್ಯವಿರುವ ಅನುದಾನದಿಂದ ಪಾವತಿಸಲಾಗುವುದು.

ಉಪ ಅರಣ್ಯ ಸಂರಕ್ಷಣಾಧಿಕಾರಿಗಳು,

ಪಿ.ಆರ್. 354 ಬನ್ನೇರುಘಟ್ಟ ರಾಷ್ಟ್ರೀಯ ಉದ್ಯಾನವನ, ಬೆಂಗಳೂರು - 83.

**IN THE COURT OF THE CITY CIVIL JUDGE AT BANGALORE**

**(CCH No.11) P & SC No. 160/2003.**

R.S. Ambika Pathy S/o Late Sri Ratnasahapathy,
Alias R. Sabathy, Hindu, Aged About 40 yrs, No.427, 7th Main, VII Cross,
Mico Layout, B.T.M. 2nd Stage, Bangalore - 560076. ..... **Petitioner.**

Vs

Smt. Rajamali, Wife of Late Sri Ratnasabhapathy @ R. Sabapathi,
Hindu, aged about 64 years, R/at No.427, 7th Main, 7th cross, Mico Layout,
BTM Layout, 2nd stage, Bangalore - 560076. ... **Respondent.**

**PUBLIC NOTICE**

Notice is hereby given that petition has been filed to this court under section 372, of Indian Succession Act, for the grant of Succession certificate in respect of Share certificate Nos. 39179- (50 certificates) Numbers 18499376 to 18499425 have been issued by Imperial Tabcco Company, No.37, Chowringhee, Calcutta, in favour of deceased Ratnasabahapathy @ R. Sabapathy died on 1.11.1970, who is the father of the petitioner and the husband of the Respondent. Be it known that no caveat nor obtained stay. The said case is posted hereing on 17.8.04. Persons claiming to have any interest in the matter of deceased Late Sri Ratnasabhapathy @ R. Sabhapathy may come and object the proceedings before grant of Succession Certificate.

**SCHEDULE:** Share certificate Nos.39179(5) Nos.18499376 to 18499425, dated: 20.3.1970 pertaining to I.T.C. Ltd, 37, Nehru Rd, Chowringhee, Calcutta.

Given under my hand and seal of the court this 18th day of June, 2004.

By Order of the Court,

PD-74 Asst Registrar, City Civil Court at Bangalore.

**ಕಾರ್ಯನಿರ್ವಾಹಕ ಇಂಜಿನೀಯರರು, ಲೋಕೋಪಯೋಗಿ ಇಲಾಖೆ ವಿಭಾಗ, ಬಾಗಲಕೋಟೆ ಇವರ ಕಛೇರಿ**

**ಸಂಖ್ಯೆ: ಲೋಇ:ಬಾವಿ:ಕಿಇಂ:ಶುಗರ್ ರಸ್ತೆ:2004-05/1001, ದಿನಾಂಕ: 15ನೇ ಜುಲೈ 2004**

**2ನೇ ಸಲ ಐಟಂವಾರು ಗುತ್ತಿಗೆ ಆಹ್ವಾನ ಪತ್ರಿಕೆ**

ಕರ್ನಾಟಕ ರಾಜ್ಯಪಾಲರ ಪರವಾಗಿ ಈ ಕೆಳಗೆ ಸಹಿ ಮಾಡಿದ ಅಧಿಕಾರಿಯವರಿಂದ ಲೋಕೋಪಯೋಗಿ ಇಲಾಖೆಯಲ್ಲಿ ನೋಂದಣಿ ಮಾಡಿಸಿದ ಅರ್ಹ ಗುತ್ತಿಗೆದಾರರಿಂದ ಕೆಳಗೆ ನಮೂದಿಸಿದ ಕಾಮಗಾರಿಗೆ ಐಟಂವಾರು ಟೆಂಡರ್‌ಗಳನ್ನು ದ್ವಿಪ್ರತಿಗಳಲ್ಲಿ ಕೆಲಸದ ಹೆಸರನ್ನು ನಮೂದಿಸಿ ಮೊಹರು ಬಂದ್ ಮಾಡಿದ ಟೆಂಡರ್‌ಗಳನ್ನು ಆಹ್ವಾನಿಸಲಾಗಿದೆ. ಟೆಂಡರ್‌ಗಳನ್ನು ಅನುಸೂಚಿತ ಅವಧಿ ಮತ್ತು ವೇಳೆಯಲ್ಲಿ ಸ್ವೀಕರಿಸಲಾಗುವುದು. ಅವುಗಳನ್ನು ಗುತ್ತಿಗೆದಾರರ ಅಥವಾ ಅವರ ಪ್ರತಿನಿಧಿಗಳ ಹಾಜರಾತಿಯಲ್ಲಿ ಅಂದೇ ಅಥವಾ ಮುಂದಿನ ಯಾವುದಾದರೂ ಕೆಲಸದ ಅವಧಿಯಲ್ಲಿ ತೆರೆಯಲಾಗುವುದು.

ಗುತ್ತಿಗೆದಾರರು ಟೆಂಡರ್‌ಗಳನ್ನು ಸಾಮಾನ್ಯ ನಿಯಮಗಳಲ್ಲಿ ಸೂಚಿಸಿದ ವಿವರಗಳನ್ನೊಳಗೊಂಡಿರುವಂತೆ, ಎಲ್ಲ ದಾಖಲೆಗಳನ್ನು ಅರ್ಜಿಯೊಂದಿಗೆ ನಿಗದಿತ ಅವಧಿಯಲ್ಲಿ ಸಲ್ಲಿಸಬೇಕು.

| ಕ್ರ. ಸಂ. | ಕೆಲಸದ ಹೆಸರು | ಟೆಂಡರಿಗಿಟ್ಟಿರುವ ಅಂದಾಜು ಮೊತ್ತ ರೂ. ಲಕ್ಷಗಳಲ್ಲಿ | ಮುಂಗಡ ಠೇವಣಿ ಹಣ ಟೆಂಡರ್ ನಿಯಮಾವಳಿ ಯಂತೆ ರೂಪಾಯಿ | ಟೆಂಡರ್ ಫಾರಂ ಬೆಲೆ ರೂ. (ಹಿಂದಿರು ಗಿಸಲಾಗುವುದಿಲ್ಲ) | ಕೆಲಸವನ್ನು ಮುಗಿಸಲು ಕಾಲಮಿತಿ | ಗುತ್ತಿಗೆದಾರರ ದರ್ಜೆ |
|---|---|---|---|---|---|---|
| 1 | ಬಾಗಲಕೋಟೆ ಜಿಲ್ಲೆಯ ಮುಧೋಳದಲ್ಲಿ ನ್ಯಾಯಾಲಯ ಸಂಕೀರ್ಣ ನಿರ್ಮಾಣ (ಹೆಚ್ಚುವರಿ ಕಾಮಗಾರಿಗಳು) | 13.41 | 20115.00 | 2320.00 ಟ್ಯಾಕ್ಸ್ ಸಹಿತ | 3 ತಿಂಗಳು | 3ನೇ ದರ್ಜೆ ಮತ್ತು ಮೇಲ್ಪಟ್ಟು |

**ಸಾಮಾನ್ಯ ವಿವರಣೆಗಳು:**

1. ಗುತ್ತಿಗೆದಾರರು ಇಂಥದೆ ಆದ ಕಾಮಗಾರಿಗಳನ್ನು ಪ್ರತಿ ಟೆಂಡರಿಗಿಟ್ಟ ಮೊತ್ತದ ಶೇಕಡಾ 30 ರಷ್ಟು ಮೊತ್ತದ ಕಾಮಗಾರಿಗಳನ್ನು ಹಿಂದಿನ 5 ಆರ್ಥಿಕ ವರ್ಷಗಳಲ್ಲಿ ಯಾವುದಾದರೂ ಒಂದು ಆರ್ಥಿಕ ವರ್ಷದಲ್ಲಿ ತೃಪ್ತಿಕರವಾಗಿ ಪೂರ್ತಿಗೊಳಿಸಿರಬೇಕು. (ಕಾಮಗಾರಿ ಮೊತ್ತವನ್ನು ಕಾಮಗಾರಿ ಪೂರ್ತಿಗೊಂಡ ಆರ್ಥಿಕ ವರ್ಷದಿಂದ ಈ ವರ್ಷದ ವರೆಗೆ ಶೇಕಡಾ 10 ರಂತೆ ಪ್ರತಿ ವರ್ಷಕ್ಕೆ ಲೆಕ್ಕ ಹಾಕುವುದು) ಅಲ್ಲದೆ ಪ್ರಸಕ್ತ ಆರ್ಥಿಕ ವರ್ಷದಲ್ಲಿ ಕಾಮಗಾರಿಯನ್ನು ಕೈಗೊಂಡಿದ್ದರೆ ಟೆಂಡರಿಗಿಟ್ಟ ಮೊತ್ತದ ಶೇಕಡಾ 30 ರಷ್ಟು ಹಣ ಪಾವತಿ ಆಗಿರಬೇಕು.
2. ಕೆಲಸಕ್ಕೆ ಬೇಕಾದ ಎಲ್ಲ ಸಾಮಗ್ರಿಗಳನ್ನು ಗುತ್ತಿಗೆದಾರರೇ ತಂದು ನಿರ್ವಹಿಸಬೇಕು. ಇಲಾಖೆ ವತಿಯಿಂದ ಯಾವುದೇ ರೀತಿ ಸಲಕರಣೆ ಹಾಗೂ ಸಾಮಗ್ರಿಗಳನ್ನು ಪೂರೈಸಲಾಗುವುದಿಲ್ಲ. ಗುತ್ತಿಗೆದಾರರು ಪೂರೈಸುವ ಸಾಮಗ್ರಿಗಳನ್ನು ಸೂಚಿಸಿದ ಪರೀಕ್ಷಣಾ ಕೇಂದ್ರದಲ್ಲಿ ತಮ್ಮ ಸ್ವಂತ ಖರ್ಚಿನಲ್ಲಿ ಪರೀಕ್ಷಿಸಿಕೊಂಡು ಸಂಬಂಧಪಟ್ಟ ಅಧಿಕಾರಿಗಳಿಗೆ ಪ್ರಮಾಣ ಪತ್ರವನ್ನು ಸಲ್ಲಿಸಿ ಅನುಮತಿ ಪಡೆದುಕೊಂಡು ಸಾಮಗ್ರಿಗಳನ್ನು ಕೆಲಸಕ್ಕೆ ಉಪಯೋಗಿಸಬೇಕಾಗುತ್ತದೆ.
3. ಮೇಲೆ ನಮೂದಿಸಿದ ಕೆಲಸದ ಟೆಂಡರ್‌ಗಳಲ್ಲಿ ಭಾಗವಹಿಸಲಿಚ್ಛಿಸುವ ಗುತ್ತಿಗೆದಾರರು ನಿಗದಿತ ಟೆಂಡರ್ ಫಾರಂ ಬೆಲೆಯನ್ನು ನಗದು ರೂಪದಲ್ಲಿ ಅಥವಾ ಡಿಮ್ಯಾಂಡ್ ಡ್ರಾಫ್ಟ್‌ನ್ನು ಕಾರ್ಯನಿರ್ವಾಹಕ ಇಂಜಿನೀಯರರು ಲೋಕೋಪಯೋಗಿ ಇಲಾಖೆ ವಿಭಾಗ ಬಾಗಲಕೋಟೆ ಇವರ ಹೆಸರಿನಲ್ಲಿ ಬಾಗಲಕೋಟದಲ್ಲಿ ಹಣ ಪಾವತಿಯಾಗುವಂತೆ ಡಿ.ಡಿ.ಯನ್ನು ಈ ಕೆಳಗೆ ನಮೂದಿಸಿದ ದಿನಾಂಕದಂದು ಅರ್ಜಿಯೊಂದಿಗೆ ಸಲ್ಲಿಸಬೇಕು.
4. ಯಾವುದೇ ಅಥವಾ ಎಲ್ಲ ಟೆಂಡರ್‌ಗಳನ್ನು ಯಾವುದೇ ಕಾರಣವಿಲ್ಲದೆ ನಿರಾಕರಿಸುವ ಹಕ್ಕನ್ನು ಟೆಂಡರ್‌ಗಳನ್ನು ನಿರ್ಧರಿಸುವ ಅಧಿಕಾರಿಗಳು ಕಾಯ್ದಿರಿಸಿಕೊಂಡಿದ್ದಾರೆ.
5. ಗುತ್ತಿಗೆದಾರರು ಫಾಯನಾನ್ಸಿಯಲ್ ಬಿಡ್‌ನಲ್ಲಿ ಐಟಂವಾರು ದರಗಳನ್ನು ಅಂಕಿಯಲ್ಲಿ ಮತ್ತು ಅಕ್ಷರಗಳಲ್ಲಿ ತಪ್ಪದೇ ನಮೂದಿಸಬೇಕು ಮತ್ತು ಮೊಹರು ಮಾಡಿ ಸಲ್ಲಿಸಬೇಕು.
6. ಸದರಿ ಕೆಲಸದ ಟೆಂಡರಿಗೆ ನಮೂದಿಸಿದ ಮುಂಗಡ ಠೇವಣಿ ಹಣವನ್ನು 'ರಾಷ್ಟ್ರೀಕೃತ : ಶೆಡ್ಯೂಲ್ ಬ್ಯಾಂಕ್‌ನಿಂದ ಡಿಮ್ಯಾಂಡ್ ಡ್ರಾಫ್ಟ್ : ಕಾಲ್ ಡಿಪಾಜಿಟ್‌ನ್ನು ಕಾರ್ಯನಿರ್ವಾಹಕ ಇಂಜಿನೀಯರರು ಲೋಇ ವಿಭಾಗ, ಬಾಗಲಕೋಟ ಇವರ ಹೆಸರಿನಲ್ಲಿ ಪಡೆದು ಟೆಂಡರ್ ಜೊತೆಗೆ ಲಗತ್ತಿಸಿ ಸಲ್ಲಿಸಬೇಕು. ಬ್ಯಾಂಕ್ ಗ್ಯಾರಂಟಿಯನ್ನು ತೆಗೆದುಕೊಂಡಲ್ಲಿ ನಿಗದಿತ ನಮೂನೆಯಲ್ಲಿ ಕೆಲಸದ ಹೆಸರು ನಮೂದಿಸಿ ಸಲ್ಲಿಸಬೇಕು. ರಾಷ್ಟ್ರೀಯ ಉಳಿತಾಯ ಪತ್ರಗಳನ್ನು ಸಲ್ಲಿಸಬಯಸುವವರು ಈ ಕೆಳಗೆ ಸಹಿ ಮಾಡಿದ ಅಧಿಕಾರಿಯವರ ಹೆಸರಿನಲ್ಲಿ ಪ್ಲೆಡ್ಜ್ ಮಾಡಿಸಿ ಲಗತ್ತಿಸಬೇಕು. ತಪ್ಪಿದಲ್ಲಿ ಅಂಥವರ ಗುತ್ತಿಗೆಯನ್ನು ತಿರಸ್ಕರಿಸಲಾಗುವುದು.
7. ಟೆಂಡರ್ ಅವಧಿ ಈ ಕೆಳಗಿನಂತಿವೆ.
   ಅ) ಅರ್ಜಿ ಸಲ್ಲಿಸಲು ಕೊನೆಯ ದಿನಾಂಕ : 04.08.2004ರ ವರೆಗೆ ಮತ್ತು ಅದಕ್ಕಿಂತ ಮೊದಲು ಕಛೇರಿ ವೇಳೆಯಲ್ಲಿ ಮಾತ್ರ.
   ಆ) ಖುಲ್ಲಾ ಟೆಂಡರ್ ಫಾರಂಗಳನ್ನು ಪೂರೈಸುವ ದಿನಾಂಕ: 07.08.2004 ರಂದು ಕಛೇರಿ ವೇಳೆಯಲ್ಲಿ ಮಾತ್ರ.

ಕ) ಟೆಂಡರ್‌ಗಳನ್ನು ಸಲ್ಲಿಸುವ ದಿನಾಂಕ: 10.08.2004 ರಂದು ಸಾಯಂಕಾಲ 4.00 ಘಂಟೆ ವರೆಗೆ ಕಾನಿಇಂ.ಲೋಇ ವಿಭಾಗ, ಬಾಗಲಕೋಟೆ ಕಛೇರಿಯಲ್ಲಿ ಸ್ವೀಕರಿಸಲಾಗುವುದು.

**ಟಿಪ್ಪಣಿ:** ಟೆಂಡರ್‌ಗಳನ್ನು ಸ್ವೀಕರಿಸಿದ ದಿನಾಂಕದಂದು ಅಥವಾ ಮುಂದೆ ಯಾವುದಾದರೂ ಅನುಕೂಲಕರ ದಿನಾಂಕದಂದು ತೆರೆಯಲಾಗುವುದು. ಮೇಲೆ ನಮೂದಿಸಿದ ದಿನಾಂಕಗಳು ಸಾರ್ವತ್ರಿಕ ರಜಾ ದಿವಸವೆಂದು ಘೋಷಿಸಿದಲ್ಲಿ ಮುಂದಿನ ಕೆಲಸದ ದಿನವನ್ನು ಪರಿಗಣಿಸಲಾಗುವುದು.

**ಡಿ.ಎನ್. ಮರೋಳ**

ಪಿ.ಆರ್. 355

ಕಾರ್ಯನಿರ್ವಾಹಕ ಇಂಜಿನೀಯರರು,
(ಲೋಇ) ಬಾಗಲಕೋಟ ವಿಭಾಗ, ಬಾಗಲಕೋಟ.

## ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ

## ಟೆಂಡರ್ ಪ್ರಕಟಣೆ

**ಸಂಖ್ಯೆ: ಸಿಆಸುಇ 106 ಡಿಟಿಎಂ 2004, ಬೆಂಗಳೂರು, ದಿನಾಂಕ: 23ನೇ ಜುಲೈ 2004**

ಕರ್ನಾಟಕ ಸರ್ಕಾರ ಸಚಿವಾಲಯದ ಕಛೇರಿಗಳಲ್ಲಿ ವಿವಿಧ ನಮೂನೆಯ ಸುಮಾರು ಮೋದಿ ಕಾಪಿಯರ್ 100 ಸಂಖ್ಯೆ, ರೀಕೋ 33 ಸಂಖ್ಯೆ, ಕಿಲ್ಬರ್ನ್ 14 ಸಂಖ್ಯೆ, ಹೆಚ್‌ಸಿಎಲ್ 10 ಸಂಖ್ಯೆ, ಹಾಗೂ ಹೆಚ್.ಸಿ.ಎಲ್. ಸಂಸ್ಥೆಯ 03 ಸಂಖ್ಯೆ ಡಿಜಿಟಲ್ ಕಾಪಿಯರ್ ಮತ್ತು 06 ಸಂಖ್ಯೆ ಡುಪ್ಲೋ ಡಿಜಿಟಲ್ ಡೂಪ್ಲಿಕೇಟರ್, ಗೆಸ್ಟೆಟ್‌ನರ್ ಸಂಸ್ಥೆಯ 03 ಸಂಖ್ಯೆಯ ಡಿಜಿಟಲ್ ಡೂಪ್ಲಿಕೇಟರ್ ಹಾಗೂ 01 ಸಂಖ್ಯೆ ಡಿಜಿಟಲ್ ಕಾಪಿಯರ್ ಯಂತ್ರಗಳಿವೆ. ಈ ಯಂತ್ರಗಳಿಗೆ ಬೇಕಾಗುವ ಬಳಕೆ ಪದಾರ್ಥಗಳನ್ನು ಆಗ್ಗಿಂದಾಗ್ಗೆ ಅಗತ್ಯಕ್ಕೆ ತಕ್ಕ ಪ್ರಮಾಣದಲ್ಲಿ ಖರೀದಿಸಲು ಉದ್ದೇಶಿಸಲಾಗಿದೆ. ಈ ಸಂಬಂಧ ತಯಾರಕರು ಅಥವಾ ಅವರ ಅಧಿಕೃತ ಮಾರಾಟಗಾರರಿಂದ ಒಂದು ವರ್ಷದವರೆವಿಗೂ ಅಗತ್ಯಕ್ಕೆ ತಕ್ಕ ಪ್ರಮಾಣದಲ್ಲಿ ಖರೀದಿಸಲು ಮೊಹರಾದ ಟೆಂಡರ್‌ಗಳನ್ನು ಆಹ್ವಾನಿಸಿದೆ. ಅಧಿಕೃತ ಮಾರಾಟಗಾರರ ಬಗ್ಗೆ ದೃಢೀಕರಣ ಪತ್ರವನ್ನು ಟೆಂಡರ್‌ನೊಂದಿಗೆ ಲಗತ್ತಿಸಿರಬೇಕು. ಖರೀದಿಯ ಅಂದಾಜು ವೆಚ್ಚವು ಸುಮಾರು ಈ ಕೆಳಕಂಡಂತಿದೆ:

| ಕ್ರಮ ಸಂಖ್ಯೆ | ಸಾಮಗ್ರಿ ವಿವರ | ವಾರ್ಷಿಕ ಖರೀದಿಸಲು ಉದ್ದೇಶಿಸಿರುವ ಅಂದಾಜು ವೆಚ್ಚ |
|---|---|---|
| 1 | ವಿವಿಧ ನಮೂನೆಯ ಮೋದಿ ಕಾಪಿಯರ್‌ಗಳ ಟೋನರ್, ಡ್ರಮ್, ಡೆವಲಪರ್, ಟೋನರ್ ಕಾಟ್ರಿಜ್, ಕಾಪಿ ಕಾಟ್ರಿಜ್, ಡ್ರಮ್ ಕಿಟ್ | 5.37 ಲಕ್ಷ |
| 2 | ವಿವಿಧ ನಮೂನೆಯ ರೀಕೋ ಕಾಪಿಯರ್‌ಗಳ ಟೋನರ್, ಡ್ರಮ್, ಡೆವಲಪರ್. | 1.49 ಲಕ್ಷ |
| 3 | ವಿವಿಧ ನಮೂನೆಯ ಕಿಲ್ಬರ್ನ್ ಕಾಪಿಯರ್‌ಗಳ ಟೋನರ್, ಡ್ರಮ್, ಡೆವಲಪರ್. | 1.74 ಲಕ್ಷ |
| 4 | ವಿವಿಧ ನಮೂನೆಯ ಹೆಚ್.ಸಿ.ಎಲ್. ಸಂಸ್ಥೆಯ ಕಾಪಿಯರ್‌ಗಳ ಟೋನರ್, ಡ್ರಮ್ ಕಿಟ್ ಫ್ಯೂಸರ್ ಕಿಟ್. | 1.50 ಲಕ್ಷ |
| 5 | ವಿವಿಧ ನಮೂನೆಯ ಹೆಚ್.ಸಿ.ಎಲ್. ಸಂಸ್ಥೆಯ ಡಿಜಿಟಲ್ ಕಾಪಿಯರ್‌ಗಳ ಟೋನರ್ ಇಂಕ್, ಡ್ರಮ್ ಕಿಟ್ ಫ್ಯೂಸರ್ ಕಿಟ್ | 1.87 ಲಕ್ಷ |
| 6 | ವಿವಿಧ ನಮೂನೆಯ ಹೆಚ್.ಸಿ.ಎಲ್. ಸಂಸ್ಥೆಯ ಡಿಜಿಟಲ್ ಡೂಪ್ಲಿಕೇಟರ್‌ನ ಟೋನರ್ ಇಂಕ್, ಮಾಸ್ಟರ್ ರೋಲ್ | 2.89 ಲಕ್ಷ |
| 7 | ವಿವಿಧ ನಮೂನೆಯ ಗೆಸ್ಟೆಟ್‌ನರ್ ಸಂಸ್ಥೆಯ ಡಿಜಿಟಲ್ ಡೂಪ್ಲಿಕೇಟರ್‌ನ ಟೋನರ್ ಇಂಕ್, ಮಾಸ್ಟರ್ ರೋಲ್. | 1.09 ಲಕ್ಷ |
| 8 | ವಿವಿಧ ನಮೂನೆಯ ರೀಸೋ ಸಂಸ್ಥೆಯ ಡಿಜಿಟಲ್ ಡೂಪ್ಲಿಕೇಟರ್‌ನ ಟೋನರ್ ಇಂಕ್, ಮಾಸ್ಟರ್ ರೋಲ್ | 0.57 ಲಕ್ಷ |
| | **ಒಟ್ಟು** | **16.52 ಲಕ್ಷ** |

ಇಚ್ಛೆಯುಳ್ಳ ತಯಾರಕರು ಅಥವಾ ಅವರ ಅಧಿಕೃತ ಮಾರಾಟಗಾರರಿಂದ ಸರ್ಕಾರದ ಅಧೀನ ಕಾರ್ಯದರ್ಶಿ, ಸಿ.ಆ.ಸು.ಇ. (ಲೆಕ್ಕಪತ್ರ) ಕೊಠಡಿ ಸಂಖ್ಯೆ:25, ನೆಲಮಹಡಿ, ವಿಧಾನಸೌಧ, ಇಲ್ಲಿ ರೂ.100-00 + ಶೇಕಡ 8 ರಂತೆ ಮಾರಾಟ ತೆರಿಗೆಯನ್ನು ನಗದು ಅಥವಾ ಡಿಮಾಂಡ್ ಡ್ರಾಫ್ಟ್ ರೂಪದಲ್ಲಿ ನೀಡಿ ರಸೀತಿಯನ್ನು ಪಡೆದು ಅನಂತರ ಟೆಂಡರ್ ನಮೂನೆಯನ್ನು ಸರ್ಕಾರದ ಅಧೀನ ಕಾರ್ಯದರ್ಶಿ, ಸಿ.ಆ.ಸು.ಇ. (ಕಾರ್ಯಕಾರಿ) ಕೊಠಡಿ ಸಂಖ್ಯೆ: 23, ನೆಲಮಹಡಿ, ವಿಧಾನಸೌಧ, ಇಲ್ಲಿ ರಸೀತಿಯನ್ನು ತೋರಿಸಿ ಪಡೆದುಕೊಳ್ಳಬಹುದು. ದಿನಾಂಕ: 21.08.2004 ರಂದು ಮಧ್ಯಾಹ್ನ 1.00 ಗಂಟೆಯವರೆಗೆ ಟೆಂಡರ್ ಫಾರಂಗಳನ್ನು ಮಾರಾಟ ಮಾಡಲಾಗುವುದು. ಈ ಟೆಂಡರ್ ನಮೂನೆಗೆ ನೀಡಿದ ಮೊತ್ತವನ್ನು ಯಾವುದೇ ಕಾರಣಕ್ಕೂ ಹಿಂದಿರುಗಿಸಲಾಗುವುದಿಲ್ಲ.

ಟೆಂಡರ್‌ಗಳನ್ನು ಸಲ್ಲಿಸಲು ಕೊನೆಯ ದಿನಾಂಕ: 23.08.2004 ರಂದು ಮಧ್ಯಾಹ್ನ 3.30 ಗಂಟೆ. ನಂತರ ಬಂದ ಟೆಂಡರ್ ಅರ್ಜಿಗಳನ್ನು ಪರಿಗಣಿಸಲಾಗುವುದಿಲ್ಲ.

ಟೆಂಡರ್‌ಗಳನ್ನು ಟೆಂಡರ್ ಬುಲೆಟಿನ್ ಅಧಿಕಾರಿಯವರು ಕೊಠಡಿ ಸಂಖ್ಯೆ: 23, ವಿಧಾನಸೌಧ, ಬೆಂಗಳೂರು ಇಲ್ಲಿ ಟೆಂಡರ್‌ದಾರರ ಸಮ್ಮುಖದಲ್ಲಿ ದಿನಾಂಕ: 24.08.2004 ಮಧ್ಯಾಹ್ನ 4.30 ಗಂಟೆಗೆ ತೆರೆಯಲಾಗುವುದು. ಟೆಂಡರ್ ತೆರೆಯುವ ದಿನಾಂಕವು ಯಾವುದಾದರೂ ಸಾರ್ವತ್ರಿಕ ರಜಾ ದಿನವಾದಲ್ಲಿ ಮಾರನೆಯ ಕೆಲಸದ ದಿನ ಅದೇ ವೇಳೆ ಮತ್ತು ಅದೇ ಸ್ಥಳದಲ್ಲಿ ತೆರೆಯಲಾಗುವುದು.

1. ಟೆಂಡರ್ ಫಾರಂಗಳನ್ನು ಈ ಕಛೇರಿಯಿಂದಲೇ ಖರೀದಿಸಿ ದ್ವಿಪ್ರತಿಯಲ್ಲಿ ಸಲ್ಲಿಸತಕ್ಕದ್ದು.
2. ಟೆಂಡರ್‌ದಾರರು ಎಲ್ಲಾ ಸಾಮಗ್ರಿಗಳಿಗೂ ಅಥವಾ ಅವರು ಸರಬರಾಜು ಮಾಡುವ ಸಾಮಗ್ರಿಗಳಿಗೆ ಮಾತ್ರ ಸೀಮಿತಗೊಳಿಸಿ ದರಗಳನ್ನು ನಮೂದಿಸಬಹುದು.
3. ಮುಂಗಡ ಠೇವಣಿ ಮೊತ್ತವು ರೂ.5,000-00 ಗಳನ್ನು ಡಿ.ಡಿ. ಮುಖಾಂತರ ಸರ್ಕಾರದ ಅಧೀನ ಕಾರ್ಯದರ್ಶಿಗಳು, ಸಿ.ಆ.ಸು.ಇ. (ಲೆಕ್ಕಪತ್ರ), ವಿಧಾನಸೌಧ, ಬೆಂಗಳೂರು-560 001 ಇವರಿಗೆ ಸಂಭೋದಿಸಿ ಲಗತ್ತಿಸತಕ್ಕದ್ದು. ಮೂಲ ಬ್ಯಾಂಕ್ ಡಿಮ್ಯಾಂಡ್ ಡ್ರಾಫ್ಟನ್ನು ಲಗತ್ತಿಸಿರದ ಟೆಂಡರ್‌ಗಳನ್ನು ತಿರಸ್ಕರಿಸಲಾಗುವುದು.
4. ದರಪಟ್ಟಿಯೊಂದಿಗೆ ಮಾರಾಟ ತೆರಿಗೆ ಕ್ಲಿಯರೆನ್ಸ್ ಸರ್ಟಿಫಿಕೇಟ್ ನಮೂನೆ 53 ರಲ್ಲಿ ಹಾಗೂ ಆದಾಯ ತೆರಿಗೆ ಕ್ಲಿಯರೆನ್ಸ್ ಸರ್ಟಿಫಿಕೇಟ್ ಸಲ್ಲಿಸತಕ್ಕದ್ದು.
5. ಸರಬರಾಜು ಮಾಡುವ ಸಾಮಗ್ರಿಗಳಿಗೆ 90 ದಿನಗಳವರೆಗಿನ ದರ ಸಿಂಧುತ್ವ ಇರಬೇಕು.
6. ಇನ್ನು ಹೆಚ್ಚಿನ ವಿವರಗಳಿಗೆ ಸರ್ಕಾರದ ಅಧೀನ ಕಾರ್ಯದರ್ಶಿ, ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಕಾರ್ಯಕಾರಿ-1) ಇವರನ್ನು ಕಛೇರಿ ವೇಳೆಯಲ್ಲಿ ಖುದ್ದಾಗಿ ಅಥವಾ ದೂರವಾಣಿ ಸಂಖ್ಯೆ: 22092440 ರಲ್ಲಿ ಸಂಪರ್ಕಿಸಬಹುದು.

**ಹೆಚ್.ಕೆ. ರವಿಮೂರ್ತಿ**
ಸರ್ಕಾರದ ಅಧೀನ ಕಾರ್ಯದರ್ಶಿ,
ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಕಾರ್ಯಕಾರಿ-1).

ಪಿ.ಆರ್. 356

## ಕರ್ನಾಟಕ ಅರಣ್ಯ ಇಲಾಖೆ

## ಉಪ ಅರಣ್ಯ ಸಂರಕ್ಷಣಾಧಿಕಾರಿಗಳ ಕಛೇರಿ, ದಾವಣಗೆರೆ ವಿಭಾಗ, ದಾವಣಗೆರೆ

## ಹರಾಜು ಪ್ರಕಟಣೆ ನಂ. ಬಿ2:ಎಂಎಫ್‌ಪಿ:ಟೆಂಡರ್:ಸಿಆರ್ 9/2004-05,

## ದಿನಾಂಕ: 6ನೇ ಮೇ 2004 ಮತ್ತು 22ನೇ ಜುಲೈ 2004

ವಿಷಯ: 2004-05ನೇ ಸಾಲಿಗೆ ಕಿರು ಅರಣ್ಯ ಉತ್ಪನ್ನಗಳ ಮರು ಟೆಂಡರ್-ಕಂ-ಹರಾಜು ಕುರಿತು.

ಈ ಮೂಲಕ ಸಾರ್ವಜನಿಕರಿಗೆ ತಿಳಿಸುವುದೇನೆಂದರೆ, ದಾವಣಗೆರೆ ಅರಣ್ಯ ವಿಭಾಗದ ಈ ಕೆಳಕಂಡ ವಲಯಗಳಲ್ಲಿನ ಅರಣ್ಯ ಪ್ರದೇಶದಲ್ಲಿ ಕಿರು ಅರಣ್ಯ ಉತ್ಪನ್ನಗಳನ್ನು 2004-05ನೇ ಸಾಲಿಗೆ ಸಂಗ್ರಹಿಸಿ, ಸಾಗಾಣಿಕೆ ಮಾಡಲು ದಿನಾಂಕ: 12.08.2004 ರಂದು ಈ ಕಛೇರಿಯಲ್ಲಿ ಅಪರಾಹ್ನ 4-30 ಗಂಟೆಗೆ ಕೆಳಸಹಿದಾರರು ಅಥವಾ ಅವರಿಂದ ಅಧಿಕೃತವಾಗಿ ನೇಮಕಗೊಂಡಿರುವ ಅಧಿಕಾರಿಗಳು ಹರಾಜು ಮಾಡಲಿರುವರು.

2004-05ನೇ ಸಾಲಿಗೆ ಈ ವಿಭಾಗದಲ್ಲಿ ನೋಂದಾಯಿತ ಅರಣ್ಯ ಗುತ್ತಿಗೆದಾರರು ಭಾಗವಹಿಸಬಹುದಾಗಿದೆ.

| ಕ್ರ. ಸಂ. | ಯುನಿಟ್ ಸಂಖ್ಯೆ | ವಲಯ | ಅರಣ್ಯ ಉತ್ಪನ್ನ ಹಾಗೂ ಪ್ರದೇಶದ ವಿವರ | ಕಾಲಾವಧಿ | ಮುಂಗಡ ಸಂಹಿತ ಠೇವಣಿ (ಇಎಂಡಿ) |
|---|---|---|---|---|---|
| **ಹುಣಸೇ ಫಸಲು** | | | | | |
| 1 | 1 | ದಾವಣಗೆರೆ | ಹುಳಿಯೂರು-ದಾವಣಗೆರೆ ರಸ್ತೆ ಬದಿ 98 ಕಿ.ಮೀ. ರಿಂದ 115 ಕಿ.ಮೀ. | 2004-05 ದಿನಾಂಕ: 30.6.2005 ಅಂತ್ಯಕ್ಕೆ (1 ವರ್ಷ ಅವಧಿಗೆ) | 2000-00 |
| 2 | 2 | ದಾವಣಗೆರೆ | ಹೊಸಪೇಟೆ-ಹರಿಹರ ಮಂಗಳೂರು ರಸ್ತೆ 103 ಕಿಮೀ ರಿಂದ 129 ಕಿಮೀ. | 2004-05 ದಿನಾಂಕ: 30.6.2005 ಅಂತ್ಯಕ್ಕೆ (1 ವರ್ಷ ಅವಧಿಗೆ) | 2000-00 |
| 3 | 3 | ದಾವಣಗೆರೆ | ಹೊಸಪೇಟೆ-ಹರಿಹರ ಮಂಗಳೂರು ರಸ್ತೆ 129 ಕಿಮೀ ರಿಂದ 139 ಕಿಮೀ. | 2004-05 ದಿನಾಂಕ: 30.6.2005 ಅಂತ್ಯಕ್ಕೆ (1 ವರ್ಷ ಅವಧಿಗೆ) | 2000-00 |
| 4 | 4 | ಹರಪನಹಳ್ಳಿ | ರಾಷ್ಟ್ರೀಯ ಹೆದ್ದಾರಿ ರಾಜ್ಯ ಹಾಗೂ ಜಿಲ್ಲಾ ರಸ್ತೆ | 2004-05 ದಿನಾಂಕ: 30.6.2005 ಅಂತ್ಯಕ್ಕೆ (1 ವರ್ಷ ಅವಧಿಗೆ) | 2000-00 |
| 5 | 5 | ಹೊನ್ನಾಳಿ | ರಾಷ್ಟ್ರೀಯ ಹೆದ್ದಾರಿ ರಾಜ್ಯ ಹಾಗೂ ಜಿಲ್ಲಾ ರಸ್ತೆ (ಹೊನ್ನಾಳಿ ಸವಳಂಗ ರಸ್ತೆ 14 ಕಿ.ಮೀ. ರಿಂದ 16 ಕಿ.ಮೀ. ರವರೆಗೆ ಸಾಲಬಾಳು (ಗ್ರಾಮ ಅರಣ್ಯ ಸಮಿತಿಗೆ ಕಾಯ್ದಿರಿಸಿದೆ) | 2004-05 ದಿನಾಂಕ: 30.6.2005 ಅಂತ್ಯಕ್ಕೆ (1 ವರ್ಷ ಅವಧಿಗೆ) | 2000-00 |

**ನಿಬಂಧನೆಗಳು**

1. ಟೆಂಡರ್ ಫಾರಂನ್ನು ರೂ.200-00 ಮತ್ತು ತೆರಿಗೆಗಳನ್ನು ಪಾವತಿ ಮಾಡಿ ಹರಾಜಿನ ದಿನ ಮಧ್ಯಾಹ್ನ 1.00 ಗಂಟೆಯ ಒಳಗಾಗಿ ಈ ಕಛೇರಿಯಲ್ಲಿ ಪಡೆಯಬಹುದಾಗಿದೆ.
2. ಹರಾಜಿನಲ್ಲಿ ಭಾಗವಹಿಸುವವರು ಇಎಂಡಿ ಮೊತ್ತವನ್ನು ಡಿ.ಡಿ. ಮುಖಾಂತರ ಹರಾಜು ಕೂಗುವುದಕ್ಕೆ ಮೊದಲು ಈ ಕಛೇರಿಗೆ ಜಮಾ ಮಾಡಬೇಕು. ಟೆಂಡರ್ ಜೊತೆಯಲ್ಲಿ ಇಎಂಡಿ ಇಲ್ಲದಿದ್ದಲ್ಲಿ ಅಂತಹ ಟೆಂಡರನ್ನು ತಿರಸ್ಕರಿಸಲಾಗುವುದು.

3. ಈ ವಿಭಾಗದಲ್ಲಿ 2004-05ನೇ ಸಾಲಿಗೆ ನೋಂದಾಯಿಸಿದ ಅರಣ್ಯ ಗುತ್ತಿಗೆದಾರರು ಮಾತ್ರ ಈ ಹರಾಜಿನಲ್ಲಿ ಭಾಗವಹಿಸಲು ಅರ್ಹರಿರುತ್ತಾರೆ.
4. ಸರ್ಕಾರಕ್ಕೆ ಬಾಕಿ ಕಟ್ಟದೆ ಇರುವ ಗುತ್ತಿಗೆದಾರರು ಈ ಹರಾಜಿನಲ್ಲಿ ಭಾಗವಹಿಸುವಂತಿಲ್ಲ. ಇದಕ್ಕೆ ತಪ್ಪಿ ಭಾಗವಹಿಸಿದ್ದಲ್ಲಿ ಅವರ ಠೇವಣಿಯನ್ನು ಮುಟ್ಟುಗೋಲು ಹಾಕಿಕೊಳ್ಳಲಾಗುವುದು.
5. ಜಯಶೀಲರಾದ ಗುತ್ತಿಗೆದಾರರು ಸದರಿ ಹರಾಜಿನ ಗುತ್ತಿಗೆಗೆ ಸಂಬಂಧಿಸಿದಂತೆ ಮೊಬಲಗಿನ ಅರ್ಧ ಭಾಗ ಹಣ ಮತ್ತು ಚಾಲ್ತಿಯಲ್ಲಿರುವ ಪೂರ್ಣ ತೆರಿಗೆಗಳನ್ನು ಹರಾಜಿನ ದಿವಸವೇ ಜಮಾ ಮಾಡತಕ್ಕದ್ದು. ಉಳಿದ ಅರ್ಧ ಭಾಗ ಹಣವನ್ನು ಗುತ್ತಿಗೆ ಕರಾರು ಒಪ್ಪಂದ ಮಾಡಿಕೊಳ್ಳುವ ಮೊದಲು ಪಾವತಿಸತಕ್ಕದ್ದು.
6. ಟೆಂಡರ್ ಫಾರಂನ್ನು ನಿಗದಿತ ಇಎಂಡಿ ಯೊಂದಿಗೆ ಮೊಹರ್ ಮಾಡಿದ ಲಕೋಟೆಯಲ್ಲಿ 4.00 ಗಂಟೆಯೊಳಗಾಗಿ ಈ ಕಛೇರಿಯಲ್ಲಿನ ಟೆಂಡರ್ ಪೆಟ್ಟಿಗೆಯಲ್ಲಿ ಹಾಕುವುದು. ಸಂಬಂಧಿಸಿದಂತೆ ಹೆಚ್ಚಿನ ವಿವರಗಳನ್ನು ಈ ಕಛೇರಿ ಕೆಲಸದ ವೇಳೆಯಲ್ಲಿ ಸಂಪರ್ಕಿಸಿ ಪಡೆಯಬಹುದಾಗಿದೆ.

ಪಿ.ಆರ್. 357 ಉಪ ಅರಣ್ಯ ಸಂರಕ್ಷಣಾಧಿಕಾರಿ, ದಾವಣಗೆರೆ ವಿಭಾಗ, ದಾವಣಗೆರೆ.

**ಆಯುಕ್ತರ ಕಛೇರಿ, ಜಲಾನಯನ ಅಭಿವೃದ್ಧಿ ಇಲಾಖೆ, ಕರ್ನಾಟಕ ಗೃಹ ಮಂಡಳಿ ಕಟ್ಟಡ, 7ನೇ ಮಹಡಿ, ಕಾವೇರಿ ಭವನ, ಕೆಂಪೇಗೌಡ ರಸ್ತೆ, ಬೆಂಗಳೂರು-9**

**"ಬಹಿರಂಗ ಹರಾಜು ಪ್ರಕಟಣೆ"**

**ಸಂಖ್ಯೆ: ಜಅಇ/ಆಡಳಿತ/ವಿವಿ-5/ವಿವ-53/2004-05, ದಿನಾಂಕ: 26ನೇ ಜುಲೈ 2004**

**ವಿಷಯ:** ಜಲಾನಯನ ಅಭಿವೃದ್ಧಿ ಇಲಾಖೆ, (ಕೇಂದ್ರ ಕಛೇರಿ) ಬೆಂಗಳೂರು, 7ನೇ ಮಹಡಿ, ಕರ್ನಾಟಕ ಗೃಹ ಮಂಡಳಿ ಕಟ್ಟಡ, ಕಾವೇರಿ ಭವನ, ಬೆಂಗಳೂರು - ಇಲ್ಲಿರುವ ನಿರುಪಯುಕ್ತ ಜಡವಸ್ತುಗಳನ್ನು ಬಹಿರಂಗ ಹರಾಜಿನ ಮೂಲಕ ವಿಲೇವಾರಿ ಮಾಡುವ ಬಗ್ಗೆ.

**ಉಲ್ಲೇಖ:** ಸಂಖ್ಯೆ: ಜಅಇ:ಆಡಳಿತ:ವಿನಿ.5:ವಿವ.53:2003-04.

ಈ ಮೂಲಕ ಸಾರ್ವಜನಿಕರಿಗೆ ತಿಳಿಯಪಡಿಸುವುದೇನೆಂದರೆ, ಆಯುಕ್ತರ ಕಛೇರಿ, ಜಲಾನಯನ ಅಭಿವೃದ್ಧಿ ಇಲಾಖೆ, 7ನೇ ಮಹಡಿ, ಕರ್ನಾಟಕ ಗೃಹ ಮಂಡಳಿ, ಕಟ್ಟಡದಲ್ಲಿರುವ ನಿರುಪಯುಕ್ತ ಜಡವಸ್ತುಗಳನ್ನು ದಿನಾಂಕ: 27.08.2004 ರಂದು 3.00 ಗಂಟೆಗೆ ಮೇಲೆ ತಿಳಿಸಿರುವ ಕಛೇರಿಯಲ್ಲಿ ಸಾಮಗ್ರಿಗಳು "ಎಲ್ಲಿದೆಯೋ, ಹೇಗಿದೆಯೋ, ಹಾಗೆಯೇ" ಬಹಿರಂಗ ಹರಾಜು ಮೂಲಕ ವಿಲೇವಾರಿ ಮಾಡಲಾಗುವುದು.

**ಅನುಪಯುಕ್ತ ಜಡವಸ್ತುಗಳ ವಿವರಗಳು**

| ಕ್ರ.ಸಂ. | ದಾಸ್ತಾನುಗಳ ವಿವರಗಳು | ಪ್ರಮಾಣ | ಹರಾಜಿನಲ್ಲಿ ವಿಲೇವಾರಿ ಮಾಡುವ ವಿಧಾನ |
|---|---|---|---|
| 1 | ಕಬ್ಬಿಣದ ರ್‍ಯಾಕುಗಳು | 8 | ಕಿಲೋ ದರದಲ್ಲಿ |
| 2 | ಕಬ್ಬಿಣದ ಟೇಬಲ್ | 5 | ಒಟ್ಟು ಹರಾಜು |
| 3 | ಮರದ ಕುರ್ಚಿಗಳು | 3 | ಒಟ್ಟು ಹರಾಜು |
| 4 | ಮರದ ಟೇಬಲ್ | 1 | ಒಟ್ಟು ಹರಾಜು |
| 5 | ಪ್ಲೈವುಡ್, ಟೇಬಲ್ ಮೇಲಿನ ಹಲಗೆ (4x6 ಅಡಿ) | 2 | ಒಟ್ಟು ಹರಾಜು |
| 6 | ವಾಹನಗಳ ಹಳೆಯ ಕಬ್ಬಿಣದ ಸಾಮಗ್ರಿಗಳು | 300 ಕೆ.ಜಿ. | ಕಿಲೋ ದರದಲ್ಲಿ |
| 7 | ಗ್ಲಾಸ್ | 5 | ಒಟ್ಟು ಹರಾಜು |
| 8 | ಕಾರಿನ ಟೈರುಗಳು | 4 | ಒಟ್ಟು ಹರಾಜು |
| 9 | ಇತರೆ ಸಾಮಗ್ರಿಗಳು | ಪ್ರಮಾಣ ಗೊತ್ತಿಲ್ಲ | ಒಟ್ಟು ಹರಾಜು |
| 10 | ಹಳೆಯ ದಿನಪತ್ರಿಕೆಗಳು ಹಾಗೂ ನಿಯತಕಾಲಿಕೆಗಳು | 3 ವರ್ಷ | ಕಿಲೋ ದರದಲ್ಲಿ |

ಆದ್ದರಿಂದ ಬಹಿರಂಗ ಹರಾಜಿನಲ್ಲಿ ಭಾಗವಹಿಸಲು ಆಸಕ್ತಿಯುಳ್ಳ ಸಾರ್ವಜನಿಕರು ಈ ಕೆಳಕಂಡ ಷರತ್ತು ನಿಬಂಧನೆಗಳೊಂದಿಗೆ ದಿನಾಂಕ: 27.08.2004 ರಂದು 3 ಘಂಟೆಗೆ ಸರಿಯಾಗಿ ಈ ಕಛೇರಿಯಲ್ಲಿ ಹಾಜರಾಗಿ ಸದರಿ ಹರಾಜಿನಲ್ಲಿ ಭಾಗವಹಿಸಬೇಕಾಗಿ ಈ ಮೂಲಕ ಕೋರಲಾಗಿದೆ.

**ಹರಾಜು ನಿಬಂಧನೆ/ಷರತ್ತುಗಳು**

1. ಹರಾಜಿನಲ್ಲಿ ಭಾಗವಹಿಸುವವರು ಹರಾಜಿಗೆ ಮುನ್ನ ರೂ.1000-00 ಗಳ ಠೇವಣಿ ನಗದು ರೂಪದಲ್ಲಿ ಕಛೇರಿಯಲ್ಲಿ ಪಾವತಿ ಮಾಡಿ, ರಶೀದಿ ಪಡೆಯತಕ್ಕದ್ದು.
2. ಹರಾಜನ್ನು ನಡೆಸಲು ಆಯುಕ್ತರು ಜಲಾನಯನ ಅಭಿವೃದ್ಧಿ ಇಲಾಖೆ, ಬೆಂಗಳೂರು ರವರಿಂದ ನಿಯೋಜಿಸಲ್ಪಟ್ಟ ಅಧಿಕಾರಿಯವರು, ಅಧಿಕಾರವನ್ನು ಹೊಂದಿರುತ್ತಾರೆ.
3. ಅನುಪಯುಕ್ತ ಸಾಮಗ್ರಿಗಳನ್ನು ಕಛೇರಿಯ ವೇಳೆಯಲ್ಲಿ ವೀಕ್ಷಿಸಬಹುದಾಗಿದೆ.

4. ಹರಾಜನ್ನು ಮಾಡುವ ದಿನಾಂಕ ಮತ್ತು ವೇಳೆಯನ್ನು ಯಾವುದೇ ಕಾರಣ ಕೊಡದೆ, ತಡೆಗೊಳಿಸುವ, ರದ್ದುಗೊಳಿಸುವ ಅಥವಾ ಮುಂದೂಡುವ ಅಧಿಕಾರವನ್ನು ಆಯುಕ್ತರಿಂದ ನಿಯೋಜಿಸಲ್ಪಟ್ಟ ಅಧಿಕಾರಿಯವರಿಗೆ ನೀಡಲಾಗಿರುತ್ತದೆ.
5. ಹರಾಜುದಾರರು ಮುಂಗಡವಾಗಿ ಕಟ್ಟಿದ ಠೇವಣಿ ಹಣವನ್ನು ಕೊನೆಗೆ ಹೆಚ್ಚು ಬಿಡ್ದುಗಳಿಸಿದ ಮೊತ್ತದಲ್ಲಿ ಹೊಂದಾಣಿಕೆ ಮಾಡಿಕೊಳ್ಳಲಾಗುವುದು, ಉಳಿದ ಹರಾಜುದಾರರಿಗೆ ಮುಂಗಡ ಹಣವನ್ನು ಹಿಂದಿರುಗಿಸಲಾಗುವುದು.
6. ಹೆಚ್ಚಿನ ಬಿಡ್ ಮಾಡಿದ ಹರಾಜುದಾರರು, ನಿಯಮಾನುಸಾರ ಮಾರಾಟ ತೆರಿಗೆ, ಸೆಸ್ ತೆರಿಗೆಗಳನ್ನು ಕಾನೂನು ಪ್ರಕಾರ ಪಾವತಿ ಮಾಡತಕ್ಕದ್ದು.
7. ಹೆಚ್ಚಿನ ಬಿಡ್ ಮಾಡಿದ ಹರಾಜುದಾರಿಗೆ ಅನುಪಯುಕ್ತ ವಸ್ತುಗಳನ್ನು ಆಯುಕ್ತರ ಮಂಜೂರಾತಿ ಪಡೆದು ವಿಲೇವಾರಿ ಮಾಡಲಾಗುವುದು.
8. ಹರಾಜಿನಲ್ಲಿ ಹೆಚ್ಚಿನ ಹಣ ಬಿಡ್ ಮಾಡಿದವರು, ಪೂರ್ಣ ಹಣವನ್ನು ಪಾವತಿಸಿ, ಸ್ವಂತ ಖರ್ಚಿನಲ್ಲಿ ವಸ್ತುಗಳನ್ನು 10 ದಿನದೊಳಗಾಗಿ ತೆಗೆದುಕೊಂಡು ಹೋಗತಕ್ಕದ್ದು, ತಪ್ಪಿದಲ್ಲಿ ಠೇವಣಿ ಹಣವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲಾಗುವುದು.
9. ಮೇಲೆ ತಿಳಿಸಿರುವ ಜಡವಸ್ತುಗಳ ದಾಸ್ತಾನು ಪ್ರಮಾಣದಲ್ಲಿ ಹೆಚ್ಚು/ಕಡಿಮೆಯಾಗುವ ಸಾಧ್ಯತೆ ಇರುತ್ತದೆ.

ಆಯುಕ್ತರ ಪರವಾಗಿ,
ಪಿ.ಆರ್. 358 ಜಲಾನಯನ ಅಭಿವೃದ್ಧಿ ಇಲಾಖೆ, ಬೆಂಗಳೂರು.

**ಕರ್ನಾಟಕ ಲೋಕಸೇವಾ ಆಯೋಗ**

**ಲೋಕಸೇವಾ ಆಯೋಗದ ಕಛೇರಿ, ಪಾರ್ಕ್‌ಹೌಸ್, ಬೆಂಗಳೂರು**

**ತಿದ್ದುಪಡಿ ಸಂಖ್ಯೆ: ಇಪ(2)803/2004-05/ಪಿಎಸ್‌ಸಿ, ದಿನಾಂಕ: 27ನೇ ಜುಲೈ 2004**

ದಿನಾಂಕ: 08.04.2004ರ ಕರ್ನಾಟಕ ರಾಜ್ಯಪತ್ರದಲ್ಲಿ ಪ್ರಕಟಗೊಂಡ ಆಯೋಗದ ಅಧಿಸೂಚನೆ ಸಂಖ್ಯೆ: ಇಪ(1)3759/03-04/ ಪಿಎಸ್‌ಸಿ ದಿನಾಂಕ: 26.03.2004 ರಲ್ಲಿ ಪ್ರಕಟಿಸಲಾಗಿರುವ 2003ನೇ ಸಾಲಿನ ದ್ವಿತೀಯ ಅಧಿವೇಶನದ ಇಲಾಖಾ ಪರೀಕ್ಷೆಗಳ ಫಲಿತಾಂಶವನ್ನು ಅದರಲ್ಲಿ ಬೆಂಗಳೂರು ಕೇಂದ್ರಕ್ಕೆ ಸಂಬಂಧಿಸಿದ "ಅಪೆಂಡಿಕ್ಸ್-ಎ" ರಡಿ "ಕೋ-ಆಪರೇಟೀವ್ ಆಡಿಟ್ ಎಗ್ಜಾಮಿನೇಷನ್" ವಿಷಯದ ಕೆಳಗೆ "NIL" ಎಂಬ ಪದವನ್ನು ಹೊಡೆದುಹಾಕಿ ಅದರ ಬದಲು "Pass Class: 37326" ಎಂಬುದನ್ನು ಸೇರಿಸಿ ಓದಿಕೊಳ್ಳುವುದು.

ಕಾರ್ಯದರ್ಶಿ ಹಾಗೂ ಇಲಾಖಾ ಪರೀಕ್ಷೆಗಳ ನಿಯಂತ್ರಕರು,
ಪಿ.ಆರ್. 359 ಕರ್ನಾಟಕ ಲೋಕಸೇವಾ ಆಯೋಗ, ಬೆಂಗಳೂರು.

**PUBLIC WORKS DEPARTMENT**

**(National Highways)**

**Office of the Executive Engineer, National Highway Division,**
**Urva Store, Ashok Nagar, Mangalore-575006 Phone No.2450415**

**TENDER NOTIFICATION**

**(Two Cover Bid System)**

**No. NHD/MNG/AE-2/I.R.Q.P/NIT/2004-05/2998, dated: 21st July 2004**

Sealed Item rate Tenders for the works noted below under TWO COVER BID SYSTEM as per Karnataka Transparency in public procurement Ordinance 2000 and Act 2000 in prescribed form in duplicate is invited from the Class-I contractors registered in KPWD Two cover bid system of tendering consists of "Technical Bid" and "Financial Bid". Bids will be received in two parts in two different sealed covers marked as" Technical Bid" and "Financial Bid". These two covers shall be sealed and kept in another sealed cover duly superscribing name of work and shall be addressed to the undersigned with name and full Postal address of the bidder. Completed bids will be received in the Office of the Superintending Engineer, National Highways Circle, Bangalore, OR in the Office of the Executive Engineer, National Highway Division, Urva Store, Mangalore Up to 4.00 P.M. on **30.09.2004,** subject to the conditions laid down in Form No. PWG 65 & 66 of KPWD code Vol. II, and in Karnataka Transparency in Public Procurement ordinance 2000 and Act 2000. The Technical Bids will be opened by the undersigned on the dates noted below. Financial Bid of only those bidders who qualify in the Technical Bid shall be opened. If any one of the dates noted below happens to be a general holiday, the next working day will hold good.

| Sl. No. | Name of Work | Amount Put to tender (In Rs) | EMD (in Rs) | Cost of Tender forms (in Rs) Non refundable including taxes | Nature of work | Time for completion of work (Excluding Monsoon) |
|---|---|---|---|---|---|---|
| 1 | 2 | 3 | 4 | 5 | 6 | 7 |
| 1. | I.R.Q.P. for 2004-05 - from KM 180.00 to 190.00 of NH-48, Bangalore-Mangalore Section. | 2,44,16,100 | 2,44,200 | 20,000 | B.U.S.G. & S.D.B.C. | 9 Months |
| 2. | I.R.Q.P. for 2004-05 - from KM 190.00 to 200.00 of NH-48, Bangalore-Mangalore Section. | 1,70,89,500 | 1,70,900 | 20,000 | B.M. & S.D.B.C. | 9 Months |
| 3. | I.R.Q.P. for 2004-05 - from KM 237.00 to 247 of NH-48, Bangalore-Mangalore Section. | 2,59,38,700 | 2,59,400 | 20,000 | B.U.S.G./ B.M. & S.D.B.C. | 9 Months |
| 4. | P.R. to NH-17 for 2004-05 - Providing B.C. from KM 241.00 to 256.00 of Panjim - Mangalore Section. | 1,77,41,100 | 1,77,450 | 20,000 | B.C. | 9 Months |
| 5. | Widening to two lane from KM 129.00 to 139.00 of NH-206, Tumkur-Honnavar Section. | 3,29,96,100 | 3,30,000 | 30,000 | WBM/BM & S.D.B.C. / C.D. works | 18 Months |

**CONDITIONS:**

1. Pre qualification requirements are detailed in the Technical Bid. Each tenderer shall use following machinery and submit evidence of ownership/pocession as detailed below.

| Sl.No. | Machinery | Numbers | Evidence of ownership to be furnished |
|---|---|---|---|
| i) | Hot Mix Plant of "Above 40 to 60 TPH" capacity (as per MOST Specification) | 1 | Purchase invoice/Sale deed with a copy of Purchase invoice from the seller. |
| ii) | Paver Finisher | 1 | -do- |
| iii) | Mechanical sprayers | 2 | -do- |
| iv) | Vibratory Road Roller | 1 | -do- |
| v) | Static Road Roller | 2 | -do- |
| vi) | Excavator | 1 | -do- for the work with Sl.No. (5) only |
| vii) | Tippers | 6 | Registration Certificate from R.T.O. |

2. The contractors interested in bidding for the work may submit an application to the undersigned along with cost of tender documents to be paid in cash or in the form of DD drawn in favour of the Executive Engineer, National Highway Division, Mangalore payable at Mangalore, along with application. The applicants should submit proof of registration while submitting the application for tender schedules, otherwise the application will not be considered.
3. Each Tenderer should have completed satisfactorily similar works of value not less than 30% of the value of the intended contract (up dated at 10% per annum compoundable) in any one financial year during a block period of previous five financial years. Alternatively the contractor should have completed a billing of 30% of the value of the intended contract during the current financial year for similar works.
4. For proof of Financial Capacity 'Line of Credit' from any Schedule Bank shall invariably be produced in the prescribed proforma of Technical Bid for an amount equal to 50% of the amount put to tender for works.
5. The **EMD** in the form of FDR/DD/Bankers Cheque/Bank Guarantee drawn from a Nationalised or Scheduled Bank or NSC (Pledged in favour of the undersigned) shall be enclosed to the **Technical Bid.** The Bank Guarantee Shall be in the Form as specified in PWG 66 supplied with

the tender form. Otherwise tender will be rejected. Regarding the validity of EMD, tender condition etc. PWG-66 shall be referred and is binding on the tenderer.

6. **The Schedule of dates is as follows:**
   a) Last date for receipt of Application : 15-09-2004 in office hours
   b) Issue of Blank Tender Schedules : 25-09-2004
   c) Last date for submission of Technical & Financial Bid : 30.09.2004 up to 4.00 PM
   d) Opening of Technical Bid : 30.09.2004 at 4.30 PM
7. All documents enclosed in support of Technical Bids shall be attested by a **DISTRICT LEVEL OFFICER.** Otherwise, the bids are liable for disqualification. The original documents should be produced for verification on the day of opening of Technical Bid or otherwise tenders will be disqualified.
8. Financial Bids of the Technically qualified tenderers will be opened in the office of the Executive Engineer, National Highway Division, Mangalore on the date and time to be intimated in due course.
9. Only relevant certificates and details shall be furnished with the Technical Bid. **Details of company/agencies/Firms profiles need not be enclosed.**
10. The competent authority reserves the right to reject any or all tenders without assigning any reason there off.
11. The tendering by Joint venture is not allowed.

Any other details regarding the work can be obtained from the above office during the office hours.

Executive Engineer,
National Highway Division, Mangalore.

PR - 361

**FORM - 1**
**(See Rule 9)**
**Government of Karnataka**
**(Department of Revenue)**
**NOTIFICATION**

**MISS. SHAILAJA HANAMAPPA BHAJANTRI,** Working as Typist in the Revenue Department- Office of the Deputy Commissioner, Bagalkot is permitted to change her Name as **SHAILAJA HANAMAPPA ILKAL.**

PD. 133 Deputy Commissioner, Bagalkot.

**FORM - 1**
**(See Rule 9)**
**Government of Karnataka**
**(Department of Revenue)**
**NOTIFICATION**

**SRI G. REVANASIDDAPPA,** Working as **S.D.A.** in the **COURT OF DISTRICT & SESSIONS JUDGE, HAVERI** is permitted to change his Name as **SRI REVANASIDDAPPA RAMANNA @ RAMAPPA GANIGER.**

**VISHWANATH V. ANGADI**
District & Sessions Judge, Haveri.

PD. 130

**ನಮೂನೆ - 1**
**(9ನೇ ನಿಯಮ ನೋಡಿ)**
**ಆರೋಗ್ಯ ಇಲಾಖೆ**
**ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳ ನಿರ್ದೇಶನಾಲಯ, ಬೆಂಗಳೂರು-9**
**ದಿನಾಂಕ: 28ನೇ ಜುಲೈ 2004**

ಆರೋಗ್ಯ ಇಲಾಖಾ ನಿರ್ದೇಶನಾಲಯದ ಮಂದಮತಿ ಮಹಿಳೆಯರ ಅನುಪಾಲನ ಗೃಹ, ಉಣಕಲ್, ಹುಬ್ಬಳ್ಳಿ (ನಿಯೋಜನೆ) ಯಲ್ಲಿ ಕೆಲಸ ಮಾಡುತ್ತಿರುವ **ಗಾಯತ್ರಿ ಶಂಕರರಾವ್ ಭೋಸಲೆ** ರವರ ಹೆಸರನ್ನು **ಗಾಯತ್ರಿ ದತ್ತಾತ್ರೇಯ ಶಿಂಧೆ** ಎಂದು ಹೆಸರು ಬದಲಾವಣೆ ಮಾಡಿಕೊಳ್ಳಲು ಅನುಮತಿ ನೀಡಲಾಗಿದೆ.

ನಿರ್ದೇಶಕರು,
ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳು, ಬೆಂಗಳೂರು-9.

ಪಿ.ಡಿ. 134